# ಈ ಕಗ್ಗೊಲೆಗಳಿಗೆ ಯಾರು ಹೊಣೆ?

**ಇಡೀ ದೇಶದಲ್ಲಿಇಂದು ದಲಿತರ ಬಾಳು ರಕ್ಷಣೆ ಇಲ್ಲದೆ ಸಾವಿನ ದವಡೆಯಲ್ಲಿ ಕೂತಿದೆ. ಕಗ್ಗೊಲೆಗಳನ್ನು ತಡೆಯಲಾಗದ ಅಸಮರ್ಥ ಹೊಣಗೇಡಿ ಪ್ರಧಾನಿ ಬಾಯಿ ಮಾತಿನಲ್ಲಿ ದಲಿತರಿಗೆ ರಕ್ಷಣೆ ಕೊಡುತ್ತೇನೆಂದು ಬೊಗಳುತ್ತಿದ್ದಾಳೆ. ಈಕೆ ಮೊನ್ನೆ ಕರ್ನಾಟಕದಲ್ಲಿ ಪ್ರವಾಸ ಮಾಡುತ್ತಾ ಮೈಸೂರಿಗೂ ಬಂದಿದ್ದಳು. ಆಸಂದರ್ಭದಲ್ಲಿ ದ.ಸಂ.ಸ. ಕಗ್ಗೊಲೆಗಳಿಗೆ ನೀವೇ ಹೊಣೆ ಎಂಬ ಕರಪತ್ರ ತಂದು ಆಕೆಯ ಬಹಿರಂಗ ಸಭೆಯಲ್ಲಿ ಹಂಚಿತು. ಅದೇ ದಿನ ಚಾಮರಾಜನಗರದ ವಿದ್ಯಾರ್ಥಿಗಳು ಕರಪತ್ರ ತಂದು ಪ್ರತಿಭಟನಾ ಮೆರವಣಿಗೆ ಮಾಡಿದರು. ಎರಡೂ ಕರಪತ್ರಗಳ ವಿವರ ಇಲ್ಲಿದೆ.**

**ಕರಪತ್ರ : ಚಾಮರಾಜನಗರ**

ಶತ ಶತಮಾನಗಳಿಂದಲೂ ದೌರ್ಜನ್ಯ, ದಬ್ಬಾಳಿಕೆ, ಶೋಷಣೆಗೆ ಒಳಗಾದ ಹರಿಜನರ ಸ್ಥಾನಮಾನಗಳನ್ನು ರಕ್ಷಿಸುವಲ್ಲಿ ಸ್ವತಂತ್ರ ಭಾರತವು ಅಸಮರ್ಥವಾಗಿದೆ. ದೇಶದಲ್ಲಿ ನಡೆಯುತ್ತಿರುವ ಹರಿಜನರ ಮೇಲಿನ ಅಮಾನುಷವಾದ ಕಗ್ಗೊಲೆಗಳು ಈ ದೇಶದ ೨೦ ಕೋಟಿ ಹರಿಜನರ ಸುಪ್ತ ಸಾಮರ್ಥ್ಯವನ್ನು ಕೆಣಕಿನಿಂತಿವೆ.

ಬಿಹಾರದ ಬೆಲ್ಚಿ, ಪಿಪ್ರಾ. ಮಹಾರಾಷ್ಟ್ರದ ಮರಾಠವಾಡ, ಮಧ್ಯಪ್ರದೇಶರಾಜಘಡ್ ತಮಿಳುನಾಡಿನವಿಲ್ಲುಪುರ, ಕರ್ನಾಟಕದನಾರಾಯಣಪುರ, ಯು ಪಿ ಯದೇವ್ಲೋಲಿ ಮತ್ತು ಸಾಧುಪುರದಲ್ಲಿ ನಡೆದ ಹರಿಜನರ ಕಗ್ಗೊಲೆಗಳು, ಸವರ್ಣೀಯ ದುಷ್ಟಶಕ್ತಿಗಳು ಹರಿಜನರನ್ನು ಜೀವಂತವಾಗಿ ಸುಟ್ಟ ರುದ್ರಭೂಮಿಗಳಾಗಿ ನಿಂತಿವೆ. ಇಡೀ ಭಾರತ ದೇಶದಲ್ಲಿ ದುಷ್ಟ ಪರಂಪರೆಯನ್ನು ಎತ್ತಿ ಹಿಡಿಯುವ ಅಮಾನವೀಯ ಪ್ರಸಂಗಗಳಾಗಿವೆ.

"ಸ್ವಾರ್ಥ ರಾಜಕಾರಣಿಗಳ, ನರಸತ್ತ ನಾಯಕರುಗಳ ಮೊಸಳೆ ಕಣ್ಣೀರು ನಮ್ಮನ್ನು ಎಚ್ಚರಿ

(ಕೊನೆಯ ಪುಟಕ್ಕೆ)


# ಪಂಚಮ

ಸಂಪುಟ : 6 ಬೆಲೆ : 50 ಪೈಸೆ

ಸಂಚಿಕೆ : 1 ಜನವರಿ 1982


## ಕೊಡಗಿನ ಕುರೂಪ ದರ್ಶನ

**ಕೊಡಗು ಪ್ರಕೃತಿ ಸೌಂದರ್ಯದಿಂದ ಕೂಡಿದ ರಮ್ಯತಾಣ. ಕೊಡಗರು ವೀರರು, ಧೀರರು, ದೃಢಕಾಯರು, ಸ್ಫುರದ್ರೂಪಿಗಳು ಎಂಬ ಖ್ಯಾತಿ. ಆದರೆ ಈ ಬೆಡಗಿನ ಕೊಡಗರ ಗತ್ತಿಗೆ ಮೂಲಾಧಾರವಾಗಿ ಜೀವ ಸವೆಸುತ್ತಿರುವವರಾರು? ಮತ್ತು ಅವರ ಬದುಕು ಎಷ್ಟೊಂದು ಭಯಾನಕವಾಗಿದೆ ಎಂಬುದು ಗೊತ್ತಿರದ ಪ್ರಕೃತಿ ಸೌಂದರ್ಯ ಪ್ರಿಯರಿಗೆ ಅದು ಹೇಗೆ ತಿಳಿಯಬೇಕು?**

**ಶ್ರೀಮತಿ ಬಿ.ಆರ್ . ಗೋಪಮ್ಮ**

ಕಾಡಿನ ಗರ್ಭದಲ್ಲಿ ಹರಿಯುವ ಝರಿಯ ನಿನಾದದಲ್ಲಿ ಆರ್ತನಾದವೆಲ್ಲ ಕರಗಿ ಹೋಗುತ್ತ ಎಷ್ಟೊಂದು ನಿರ್ಗತಿಕರು ಮಾಯವಾಗುತ್ತಾರೆಂಬುದು ಕಲ್ಪನೆಗೂ ನಿಲುಕದ ವಾಸ್ತವವಾಗಿದೆ.

ಬೆಟ್ಟದ ಸೆರಗಿನಲ್ಲಿ ಬೆಳೆದು ನಿಂತ ಕಾಫಿ ತೋಟಗಳು ಕಾಡಿಗೂ ಮೆರಗು ಕೊಡುತ್ತವೆ ಎಂಬುದಷ್ಟೇ ವಿಶೇಷವಲ್ಲ, ಅವು ಕೊಡಗರ ಭಂಡಾರಗಳೂ ಹೌದು. ಕಾಫಿ ತೋಟಗಳಲ್ಲಿ ವಂಶ

[10 ನೇ ಪುಟಕ್ಕೆ]

# ಭೂಮಿ ಸಮಸ್ಯೆ: ತಿಂಗಳ ಧರಣಿಗೂ ಬಗ್ಗದ ಕುವ್ಯವಸ್ಥೆ

**ಹೊಳೆನರಸೀಪುರ ತಾಲ್ಲೂಕು ಕೆ. ಮುದ್ದನಹಳ್ಳಿಯ ದಲಿತರು ದ. ಸಂ. ಸ ಹಾಸನ ಶಾಖೆ ನೇತೃತ್ವದಲ್ಲಿ ನವೆಂಬರ್. ೯, ೮೧ ರಿಂದ ಹಾಸನ ಜಿಲ್ಲಾಧಿಕಾರಿ ಕಛೇರಿ ಮುಂದೆ ಧರಣಿ ನಡೆಸುತ್ತಿದ್ದಾರೆ. ಕಳೆದ ೨೩ ವರ್ಷಗಳ ಹಿಂದೆ, ಮೇ ೩ ೫೮ ರಂದು ಗ್ರಾಮದ ಐವರು ದಲಿತರು ೧೦ ಎಕರೆ ೯ ಗುಂಟೆ ಜಮೀನಿಗಾಗಿ ಸಾಗುವಳಿಚೀಟಿ ಪಡೆದರು. ಈಜಮೀನುಸುತ್ತ ೨೫ ಎಕರೆ ಒಳ್ಳೆ ಜಮೀನುಳ್ಳ ಕೆರೆಗೋಡುಶ್ರೀಮಂತ ಕೆ.ಜಿ.ಗಿಡ್ಡೇಗೌಡ ಗದ್ದೆಯಾಗುವ ಈ ಜಮೀನು ದಲಿತರಿಗೆ ಸಿಗುತ್ತದಲ್ಲ! ಎಂದು ಅದನ್ನು ಲಪಟಾಯಿಸಲು ಪ್ರಯತ್ನಿಸಿದ. ಈ ಸಂಬಂಧವಾಗಿ ಈತ ಜಿಲ್ಲಾಧಿಕಾರಿ, ಡಿವಿಜನಲ್ ಕಮಿಷನರ್,**



ಅಫಿಲೇಟ್ ಲ್ಯಾಂಡ್ ಟ್ರಿಬ್ಯೂನಲ್, ಮುನ್ಸಿಫ್- ಸಿವಿಲ್- ಹೈಕೋರ್ಟ್‌ಗಳಲ್ಲಿ ಅಪೀಲ್ ಮಾಡಿಕೊಂಡರೂ, ಎಲ್ಲವೂ ದಲಿತರ ಪರ ತೀರ್ಪಿತ್ತವು.

ಈಮಧ್ಯೆ ಮೇಲಿನ ಜಮೀನಿಗೆ ಸಂಬಂಧಪಟ್ಟ ರೆಕಾರ್ಡುಗಳನ್ನು ಹೂತುಹಾಕಿದ ಲಂಚಕೋರ ಅಧಿಕಾರಿಗಳಿಂದ, ತನ್ನ ಹೆಸರಿಗೆ ಪಾಣಿಮಾಡಿಸಿಕೊಂಡು ಜಮೀನು ತನ್ನದೆನ್ನೋ ದವಲತ್ತಿನಿಂದಿರುವ ಗಿಡ್ಡೇಗೌಡ ಗೂಂಡಾಗಳನ್ನು, ರಾಜಕಾರಣಿಗಳನ್ನು ಸಾಕುತ್ತಿದ್ದಾನೆ. ನ್ಯಾಯಾಲಯದ ತೀರ್ಪಿನಂತೆ ದಲಿತರಿಗೆ ಸಿಗಬೇಕಾದ ಭೂಮಿಯನ್ನು ಅವರಿಗೇ ಬಿಡಿಸಿಕೊಡಲು ವಿಳಂಬ ಮಾಡುತ್ತಿರುವ ಸರ್ಕಾರದ ನೀತಿಯನ್ನು ದ.ಸಂ.ಸ ಖಂಡಿಸುತ್ತಾ, ನ್ಯಾಯಕ್ಕಾಗಿ ತೀವ್ರವಾದ ಹೋರಾಟ ಮಾಡಲು ನಿರ್ಧರಿಸಿದೆ. ●

# ಚಿಲ್ಕುಂದದಲ್ಲಿ ಹೊಲೆಯರನ್ನು ಸುಡಲು ತಯಾರಿ

ಚಿಲ್ಕುಂದದಲ್ಲಿ ಮಹಾದೇವ ಎಂಬ ಹರಿಜನ ಹುಡುಗನೊಬ್ಬ ಬ್ರಾಹ್ಮಣ ಹುಡುಗಿಯೊಂದಿಗೆ ಸಂಬಂಧ ಇಟ್ಟುಕೊಂಡಿದ್ದಕ್ಕಾಗಿ ಅಲ್ಲಿನ ಬ್ರಾಹ್ಮಣರು ಆತನನ್ನು ಕೊಂದು, ನಂತರ ಕೊಲೆಯ ಹಿನ್ನೆಲೆಯಾಗಿ ದಲಿತ ಸಂಘರ್ಷಸಮಿತಿ ಮಾಡಿದ ಜಾತಾಕ್ಕೆ ಪ್ರತಿಯಾಗಿ ಸಂಬಂಧಪಟ್ಟ ಎಸ್.ಐ.ನ್ನು ಸಸ್ಪೆಂಡ್ ಮಾಡಲಾಗಿದೆ. ಪೋಲೀಸಿನವರು ಮಹಾದೇವನ ಸಂಬಂಧಿಕರ ಮೇಲೆ ಸೇಡು ತೀರಿಸಿಕೊಳ್ಳುತ್ತಿದ್ದಾರೆ. ಜಾತಾದ ನಂತರ ಎಸ್.ಪಿ. ಅವರು ಹೂತಿಟ್ಟ ಶವವನ್ನು ಪುನಃ ವೈದ್ಯಕೀಯ ಪರೀಕ್ಷೆಗೆ ಒಳಪಡಿಸಿದರು. ಆದರೆ ಮತ್ತೆ ಸುಳ್ಳು ಸರ್ಟಿಫಿಕೇಟ್ ಕೊಡುವುದಲ್ಲದೆ ಮುರಿದುಹೋಗಿದ್ದ ಹಲ್ಲು ದವಡೆ ಜಂತವನ್ನು ಪೂರ್ತಿ ಕತ್ತರಿಸಿಕೊಂಡು ಮೃತ ದೇಹವನ್ನು ಕೊಟ್ಟಿರುತ್ತಾರೆ.

ಅಲ್ಲದೆ ಚಿಲ್ಕುಂದ ಗ್ರಾಮದ ಬ್ರಾಹ್ಮಣರಿಂದ ಚಂದಾಹಣವನ್ನು ಕೂಡಿಸಿ ಯಜಮಾನ್ ಸಿ.ವಿ. ನರಸಿಂಹಮೂರ್ತಿ, ಸಿ.ಎಸ್. ವೆಂಕಟನಾರಾಯಣ, ಸಿ.ಎಸ್. ಶ್ರೀನಿವಾಸಮೂರ್ತಿ, ಸಿ.ಎನ್. ಸುಬ್ರಾಯ ಇತ್ಯಾದಿಗಳು ಪ್ರತಿದಿನ ಗುಂಪುಕಟ್ಟಿಕೊಂಡು "ಡಿ.ಐ.ಜಿ. ಮೂರ್ತಿ ಅವರು ನಮ್ಮ ಬ್ರಾಹ್ಮಣರು. ಅವರ ಕೃಪೆ ನಮ್ಮ ಮೇಲೆ ಇದೆ. ಈಗ ಚಿಲ್ಕುಂದ ಗ್ರಾಮದ ಹೊಲೆಯರನ್ನು ಸುಟ್ಟುಬೂದಿಮಾಡುತ್ತೇವೆಂದು" ಹೇಳುತ್ತಿರುತ್ತಾರೆ.

ಮೇಲ್ಕಂಡ ಕಾರಣಗಳಿಂದ ಕೊಲೆಯ ತನಿಖೆಯನ್ನು ಸಿ.ಓ.ಡಿ. ಪೋಲೀಸ್ ಇಲಾಖೆಯಿಂದ ನಡೆಸಿ ಸೂಕ್ತ ನ್ಯಾಯ ದೊರಕಿಸಿ ಕೊಡಬೇಕೆಂದು ಒತ್ತಾಯಿಸಿ ಮೃತನ ಅಕ್ಕ ಮಾದೇವಿಯವರು ಮೇಲಾಧಿಕಾರಿಗಳಿಗೆ ಅರ್ಜಿಯೊಂದನ್ನು ಸಲ್ಲಿಸಿದ್ದಾರೆ.

## ಅಭಿಪ್ರಾಯ

### "ಸತ್ತಜನ ಹುಟ್ಟಿ ಬರ್ತಾರಾ?"

ಮೈಸೂರಿನಲ್ಲಿ ಮೊನ್ನೆ ನಡೆದ ದೇವ್ನೋಲಿ ಹರಿಜನ ಹತ್ಯೆಯ ವಿರುದ್ಧದ ಪ್ರತಿಭಟನಾ ಮೆರವಣಿಗೆಯಲ್ಲಿ ಸಾಕಷ್ಟು ಜನರು, ವಿದ್ಯಾರ್ಥಿಗಳು ಭಾಗವಹಿಸಿದ್ದರು. ಆದರೆ ಇಡೀ ಮೆರವಣಿಗೆಯುದ್ದಕ್ಕೂ ನನಗೆ ಕಂಡ ಗಂಗೋತ್ರಿಯ ವಿದ್ಯಾರ್ಥಿಗಳು ಕೇವಲ ಇಪ್ಪತ್ತಕ್ಕಿಂತ ಕಡಿಮೆ. ಗಂಗೋತ್ರಿಯ ಗೆಳೆಯರನ್ನೇ ನಾನು ಒತ್ತಿ ಹೇಳುವ ಕಾರಣ ಎಂದರೆ ಅಲ್ಪಸ್ವಲ್ಪ ಚಿಂತನೆ ಮಾಡುವ ವಯಸ್ಸು ಹಾಗೂ ತಾಣ ಗಂಗೋತ್ರಿಯ ವಿದ್ಯಾರ್ಥಿಗಳಿಗೆ ಇದೆ ಎಂದು ನಂಬಿಕೊಂಡಿದ್ದೇನೆ. ಈ ಬಗ್ಗೆ ಮೆರವಣಿಗೆಗೆ ಹೋಗದ ಮಿತ್ರನೊಬ್ಬನನ್ನು ನಾನು "ಏಕೆ ಹೋಗಲಿಲ್ಲ?" ಎಂದು ಪ್ರಶ್ನಿಸಿದೆ. ಆಯ್ಯೊ ಅವರಿಗೇನೂ ಕೆಲ್ಸ ಇಲ್ಲ. ಸುಮ್ನೆ ಮನೇಲಿ ಕುಂತ್ಕನಾರ್ದೆ ಮೆರವಣಿಗೆ ಮಾಡ್ತರೆ. ಇವರು ಮೆರವಣಿಗೆ ಮಾಡಿದ್ರೆ ದೇವ್ನೋಲೀಲಿ ಸತ್ತಜನ ಮತ್ತೆ ಹುಟ್ಟಬರ್ತಾರಾ?' ಎಂದು ಮತ್ತೆ ನನಗೇ ಪ್ರಶ್ನಿಸಿದ. ನನಗೆ ವಿಸ್ಮಯವಾಯಿತು.

ದಲಿತ ಮಿತ್ರರೆಂದರೆ ಅಭಿಮಾನವಿದ್ದ ನನಗೆ ಯಾಕೋ ಮನಸ್ಸಿನಲ್ಲಿ ನೋವಾದ ಅನುಭವವಾಯಿತು. ಸಹಸ್ರಾರು ವರ್ಷಗಳಿಂದ ನೊಂದು-ಬೆಂದು ಜನರಾಗದೇ ಬದುಕಿದವರು, ವ್ಯಕ್ತಿತ್ವ ಕೂಡಿ ಬದುಕಬೇಕೆಂದು ಕೂಗುತ್ತಿರುವಾಗ ಸಾಕಷ್ಟು ಜನ, ಮಾನವೀಯತೆಯ ಬಗ್ಗೆ ಚಿಂತನೆ ಮಾಡುವ ಜಾತಿಬಿಟ್ಟ ಜನ ಸಹಕಾರ ಮಾಡುತ್ತಿರುವಾಗ ಇಂತಹ "ಹರಿಜನ ಸವರ್ಣೀಯ" ಗುಂಪು ಇಡೀ ಬಂಡಾಯಕ್ಕೆ ಲಗ್ಗೆ ಹಾಕುತ್ತಿದೆ.

ಇಂತಹ ಗುಂಪಿಗೆ ನಾನು ಕೇಳುವ ಪ್ರಶ್ನೆ? "ಮಾನವೀಯತೆಯ ಬಗ್ಗೆ ನಂಬಿಕೆ ಇದ್ದರೆ ನೀವು ನಿಮ್ಮ ಜನರ ಬಗ್ಗೆ ಯೋಚಿಸಿರಿ. ಇಲ್ಲವಾದರೆ ಬದುಕಿನಲ್ಲಿ ಸಾಧಿಸುವುದಾದರೂ ಏನು?

–ಶ್ರೀರಾಮು ಬಿದರೆಕೋಟೆ, ಮೈಸೂರು-೬

### ಎದ್ದುಬಂದ ದೇವ್ನೋಲಿ ದಲಿತರು

ದೇವ್ನೋಲಿ ಕಗ್ಗೊಲೆ ವಿರುದ್ಧ ಮೈಸೂರು ದಲಿತ ಸಂಘರ್ಷ ಸಮಿತಿ ಏರ್ಪಡಿಸಿದ್ದ ಭಾರಿ ಪ್ರತಿಭಟನಾ ಮೆರವಣಿಗೆಯಲ್ಲಿ ನಾನೂ ಭಾಗವಹಿಸಿದ್ದೆ. ಎಲ್ಲಾ ರೀತಿಯಿಂದಲೂ ಮೆರವಣಿಗೆ ಭಾರೀ ಯಶಸ್ವಿಯಾಗೇ ಆಯಿತು. ಆದರೂ, ಇಷ್ಟೆಲ್ಲ ಮಾಡಿದರೂ ಈ ಕ್ರೂರ ಸಾಮಾಜಿಕ ವ್ಯವಸ್ಥೆಯ ಬಂದೂಕಗಳಿಗೆ ಬಲಿಯಾದ ದೇವ್ನೋಲಿ ದಲಿತರು ಎದ್ದು ಬರುತ್ತಾರಾ? ಎಂಬ ಪ್ರಶ್ನೆ ಮೆರವಣಿಗೆ ನಡುವೆ ಒಮ್ಮೆ ನೆನಪಾಗಿ ನನ್ನನ್ನು ಅಲ್ಲಾಡಿಸಿತು. ಕೊನೆಗೆ ನೋವಿನಿಂದ, ಸಿಟ್ಟಿನಿಂದ ಉರಿಯುತ್ತಾ ಈ ವ್ಯವಸ್ಥೆಯ ವಿರುದ್ಧ ಧಿಕ್ಕಾರ ಕೂಗುತ್ತಿದ್ದ ದಲಿತ ಬಂಧುಗಳಲ್ಲಿ ದೃಢತೆಯನ್ನು ನೆನೆದಾಗ, ಬಂದೂಕಗಳಿಗೆ ಎದೆಕೊಟ್ಟ ದೇವ್ನೋಲಿ ದಲಿತರು ಈ ಯುವಕರ ಮೈಯಲ್ಲಿ ಜೀವಂತವಾಗಿ ಎದ್ದು ಬಂದಿದ್ದಾರೆ ಎನ್ನಿಸಿತು. ಇಂಥ ಪ್ರತಿಭಟನಾ ಮೆರವಣಿಗೆ, ಧರಣಿ, ಮತಪ್ರದರ್ಶನಗಳಲ್ಲಿ ಎಲ್ಲಾ ದಲಿತರೂ ಭಾಗವಹಿಸುವಂತಾದರೆ ಏನಿಲ್ಲವೆಂದರೂ ಮುಂದೆ ನಡೆಯಬಹುದಾದ ದಲಿತರ ಕೊಲೆಗಳ ಸಂಖ್ಯೆಯಾದರೂ ಕಡಿಮೆಯಾಗಬಹುದು ಎನ್ನಿಸಿ ಉಸಿರಾಡಿದೆ.

—ಎಲ್. ಮಹಾದೇವಯ್ಯ, ಮೈಸೂರು.

### ಮನಸ್ಸಿಗೆ ನಾಟುವ ಪ್ರಶ್ನೆಗಳು

ಕಳೆದ ಸಂಚಿಕೆಯ 'ದೇವ್ನೋಲಿ ಅಳಲೂ ಕಣ್ಣೀರಿಲ್ಲ' ಸಂಪಾದಕೀಯವು ಪಂಚಮ ಓದುವ ಸವರ್ಣೀಯರ ಮನಸ್ಸನ್ನು ನಾಟಿ ಅನೇಕ ಪ್ರಶ್ನೆಗಳನ್ನು ಕೇಳುತ್ತದೆ. ಇದೊಂದು ಆವೇಶದ ಪತ್ರಿಕೆ ಎನ್ನುವವರು ಈ ಸಂಚಿಕೆಯ ಯಾವ ಬರಹವನ್ನು ಹೆಸರಿಸುತ್ತಾರೆ?

ಮುಕ್ತಮನಸ್ಸಿನ ಸವರ್ಣೀಯರು ಪಂಚಮಕ್ಕೆ ಚಂದಾಕೊಟ್ಟರೆ ಎಷ್ಟು ಚಂದ.

—ನಟರಾಜಪ್ಪ
ತುಮಕೂರು.

---

# ದಲಿತ ಭೀಮಾಬೋವಿ ಕೊಲೆ ಯತ್ನ

ವರದಿ : ಬಿ.ಪಿ. ಪ್ರಕಾಶಮೂರ್ತಿ

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕಿನ ಸೂರಗೊಂಡನ ಹಳ್ಳಿಯಲ್ಲಿ ೧೫-೧೧-೮೧ ರಂದು ದಲಿತ ಭೀಮಭೋವಿಯವರ ಕೊಲೆಯ ಪ್ರಯತ್ನ ನಡೆದು ಆಕಸ್ಮಿಕವಾಗಿ ಭೀಮ ಭೋವಿಯವರು ಬಚಾವಾಗಿದ್ದಾರೆ. ಈ ಕೊಲೆಯ ಪ್ರಯತ್ನವು ಬೀದರ್ ಜಿಲ್ಲೆಯ ಗುಂಡಪ್ಪ ಹಿರೋಳಿ ಕಗ್ಗೊಲೆಯನ್ನು ನೆನಪಿಸುವಂತಿದೆ. ಸವರ್ಣೀಯ ಭೂಮಾಲೀಕ ಜಾತಿವಾದಿಗಳ ನಡುವೆ ರೈತಾಪಿ ಕೂಲಿಕಾರರಿಗೆ ಕೂಲಿ ಹೆಚ್ಚಿಸಬೇಕೆಂದು ಒತ್ತಾಯಿಸುವಷ್ಟು ಶ್ರೀ ಭೀಮ ಭೋವಿ ಬೆಳೆದು ನಿಂತು ದಲಿತರ ಉಸಿರಾದ್ದು ಈ ಕೊಲೆ ಪ್ರಯತ್ನಕ್ಕೆ ಮುಖ್ಯಕಾರಣವಾಗಿದೆ. ಜೊತೆಗೆ ಭೀಮಭೋವಿಯವರು ಮುಕ್ಕಾಲು ಎಕರೆ ಭೂಮಿಯನ್ನು ಖರೀದಿಸಿದ್ದನ್ನು ಸಹಿಸದ ಸವರ್ಣೀಯ ಜಾತೀವಾದಿ ನಿಜಲಿಂಗಪ್ಪ, ರಾಮಲಿಂಗಪ್ಪ, ಚಿದಾನಂದಪ್ಪಗಳು ಕೂಡಿ ಈ ಕೊಲೆ ಸಂಚು ನಡೆಸಿದರೆನ್ನಲಾಗಿದೆ ಈ ಸಂಚಿನ ಸುಳಿವು ತಿಳಿದ ಭೀಮಭೋವಿಯವರು ಕೊಲೆ ಪ್ರಯತ್ನ ನಡೆದ ೩೦ ದಿನ ಮುಂಚಿತವಾಗೆ ಹಿರಿಯೂರು ಪೋಲೀಸ್‌ಗೆ ವಿಷಯ ತಿಳಿಸಿ ರಕ್ಷಣೆ ಕೇಳಿದ್ದರೂ ಬಲಿಷ್ಠರ ಪ್ರಭಾವಕ್ಕೊಳಗಾದ ಪೋಲೀಸರ ನಿರ್ಲಕ್ಷ್ಯದಿಂದಾಗಿ ಭೀಮಭೋವಿಯವರ ಕೊಲೆ ಪ್ರಯತ್ನ ಸಂಭವಿಸುವಂತಾಗಿದೆ.

ಈ ಘಟನೆಯನ್ನು ಪ್ರತಿಭಟಿಸಿ ದಲಿತ ಸಂಘರ್ಷ ಸಮಿತಿಯು ಸೂರಗೊಂಡನ ಹಳ್ಳಿಯಿಂದ ಹಿರಿಯೂರಿಗೆ ೧೫೦ ಜನರ ಜಾಥಾ ನಡೆಸಿ ತಪ್ಪಿತಸ್ಥರಿಗೆ ಶಿಕ್ಷೆಗೆ ಒತ್ತಾಯಿಸಿದೆ. ಬಹಿರಂಗ ಸಭೆಯಲ್ಲಿ ಪರ್ವತರಾಜ, ಜಯಣ್ಣ, ಹನುಮಂತಪ್ಪ ಮಾತನಾಡಿ ಈ ಕೊಲೆ ಸಂಚಿನಲ್ಲಿರುವ ಪೋಲೀಸರ ಹಿನ್ನೆಲೆಯನ್ನು ಖಂಡಿಸಿ ತನಿಖೆಗೆ ಒತ್ತಾಯಿಸಿರುವರು.

## ಶಿಕ್ಷಕರ ಹೋರಾಟಕ್ಕೆ ಜಯ

ವರದಿ : ಗಂಗಾ

ಚಿಕ್ಕಮಗಳೂರಲ್ಲಿ ೧೮೫ ಪ್ರಾಥಮಿಕ ಶಿಕ್ಷಕ ಹುದ್ದೆಗಳು ಖಾಲಿ ಇದ್ದರೂ ನೇಮಕ ಮಾಡಿಕೊಳ್ಳದೇ ಇರದ್ದಕ್ಕಾಗಿ ದಿನಾಂಕ ೫-೧೧-೮೧ ರಿಂದ ಕೆಲಸ ಕಳೆದುಕೊಂಡ ನೂರಾರು ದಲಿತ ಶಿಕ್ಷಕರು ದಲಿತ ಸಂಘರ್ಷ ಸಮಿತಿಯ ನೇತೃತ್ವದಲ್ಲಿ ಹೋರಾಟಕಿಳಿದು ಪಂಜಿನ ಮೆರವಣಿಗೆಯನ್ನು ಮಾಡಿದರು. ಮಂತ್ರಿ ಬೇಗಾನೆ ರಾಮಯ್ಯ, ಡಿ.ಎಂ. ಪುಟ್ಟೇಗೌಡ (ಎಂ.ಪಿ) ಹಾಗೂ ಶಾಸಕ ಸಿ.ಎ. ಚಂದ್ರೇಗೌಡರಿಂದ ಬೇಜವಾಬ್ದಾರಿ ಉತ್ತರ ಬಂದಾಗ ಘೇರಾವೊ ಮಾಡಲಾಯಿತು. ಮುಂದೆ ಸಚಿವೆ ನಾಗಮ್ಮ ಕೇಶವಮೂರ್ತಿ ಅವರಿಗೂ ದಿನಾಂಕ ೧೨-೧೨-೮೧ರಂದು ಇದೇ ರೀತಿಯಲ್ಲಿ ಪ್ರತಿಭಟಿಸಲಾಯಿತು. ಅಲ್ಲದೆ ಕಾರಿಗೆ ಅಡ್ಡ ಮಲಗಲಾಯಿತು. ಪೋಲೀಸರು ೬೦ ಜನರನ್ನು ಬಂಧಿಸಿ ರಾತ್ರಿ ಬಿಟ್ಟರು. ಮುಂದೆ ಸರ್ಕಾರ ಹೋರಾಟಕ್ಕೆ ಮಣಿದು ದಿನಾಂಕ ೧೮-೧೨-೮೧ರಂದು ಎಲ್ಲಾ ಶಿಕ್ಷಕರನ್ನು ೧೦-೪-೮೨ರವರೆಗೆ ಹಂಗಾಮಿಯಾಗಿ ಕೆಲಸಕ್ಕೆ ತೆಗೆದುಕೊಳ್ಳುವ ಆದೇಶ ಹೊರಡಿಸಿದೆ.

## ಸೂರ್ಯ

ಸೂರ್ಯ, ನೀನು
ಕತ್ತಲೆಯ ಗರ್ಭ ಸೀಳಿ
ದೂರ ಹೋದೆ.
ಆಗ ನಾವು
ಕಪ್ಪು-ಬಿಳುಪಿನ
ಮೇಲು-ಕೀಳಿನ
ಅಂತರ ಕಂಡೆವು.

ಸೂರ್ಯ,
ನಿನ್ನ ಮಕ್ಕಳು ನಾವು
ಹೋರಾಡುತ್ತ ಸಾಗಿದ್ದೇವೆ
ನಿತ್ಯವೂ ಕತ್ತಲೆಯ ಸೈನ್ಯದೊಡನೆ.

ನೀನೀಗ ಬಂದಿ
ಕತ್ತಲೆಯ ವೀರರು
ಎರಚಿದರು ನಿನ್ನ ಮುಖಕ್ಕೆ
ಕೊಂದ ಮಕ್ಕಳ ರಕ್ತವನ್ನೆಲ್ಲ.

ನೀನು
ದುಃಖದಿಂದ ಭೂಮಿಗಿಳಿದೆ.

ಆದರೆ ಸೂರ್ಯ,

ನಿನ್ನ ತುಣುಕುಗಳು ನಾವು
ಜೀವಂತವಿದ್ದೇವೆ ಇನ್ನೂ
ನೀ ಬರುವವರೆಗೆ
ಮಿನುಗುತ್ತಲೇ ಇರುತ್ತೇವೆ
ಕತ್ತಲೆಯ ವಿರುದ್ಧ
ಬಂಡೇಳುತ್ತಲೇ ಇರುತ್ತೇವೆ.

ಇನ್ನು
ನಿನ್ನ ಉದಯದ ನಂತರ
ಮತ್ತೆ ಕತ್ತಲಾಗದು
ಮೇಲು-ಕೀಳು ಇರದು.

—ರಮಜಾನದರ್ಗಾ

# ಕಗ್ಗೊಲೆಗಳಿಗೆ ಪ್ರತಿಭಟನೆ ಮುಖೇನ ಅಂಬೇಡ್ಕರ್ ನೆನಪು

ಡಿಸೆಂಬರ್ 6. ಅಂಬೇಡ್ಕರರು ನಮ್ಮನ್ನಗಲಿದ ದಿನ. ಸ್ವಾಭಿಮಾನ, ಅಸಮಾನತೆಯ ಅರಿವು ಮೂಡಿಸಿದ ಅವರ ನೆನಪನ್ನು ಅಂದು ದ.ಸಂ.ಸ ಶಾಖೆಗಳು, ದಲಿತರ ಕಗ್ಗೊಲೆಗಳ ವಿರುದ್ಧ ಪ್ರತಿಭಟನಾ ಮೆರವಣಿಗೆ ಹಾಗು ಸಾಂಸ್ಕೃತಿಕ ಸಪ್ತಾಹ ನಡೆಸಿ, ಅವರ ನೆನಪಿನ ದಿನಾಚರಣೆಯಾಗಿ ಆಚರಿಸಿದವು. ಬೆಂಗಳೂರು ಶಾಖೆಯು ಸಾಂಸ್ಕೃತಿಕ ಸಪ್ತಾಹ ಮಾಡಿ ಬೀದಿನಾಟಕ, ಹಾಡುಗಳು, ಭಾಷಣಗಳನ್ನು ಏರ್ಪಡಿಸಿತ್ತು. ಭ್ರಷ್ಟ ರಾಜಕಾರಣಿಗಳು ಅಂಬೇಡ್ಕರ್ ಹೆಸರನ್ನು ದುರುಪಯೋಗಪಡಿಸಿಕೊಳ್ಳುತ್ತಿರುವ ಇಂದು ನಾವುಗಳು ಮಾಡಬೇಕಾಗಿರುವ ಮುಖ್ಯ ಕೆಲಸ ಜನತೆಗೆ ಅರಿವು ಮೂಡಿಸುವುದೇ ಆಗಿದೆ.



(ಕೋಲಾರ ನಗರ ಪ್ರತಿಭಟನಾ ಮೆರವಣಿಗೆ ಚಿತ್ರ)

# ದೇವ್ಲೋಲಿ ನರಬೇಟೆ : ಕಣ್ಣಾರೆ ಕಂಡಂತ ಕಥೆ

ಸೇಡಿಗಾಗಿ ಹೊಂಚು ಹಾಕುತ್ತಿದ್ದ ಠಾಕೂರ್ ಡಕಾಯಿತರ ಗುಂಪೊಂದರಿಂದ, ನವಂಬರ್ 18ರ ಸಂಜೆ, ಉತ್ತರ ಪ್ರದೇಶದ ಮಣಿಪುರಿ ಜಿಲ್ಲೆಯ ದೇವ್ಲೋಲಿಗ್ರಾಮದಲ್ಲಿ ಕೇವಲ ಒಂದು ಗಂಟೆಯೊಳಗೆ 24 ಹರಿಜನರ ಸಾಮೂಹಿಕ ಕಗ್ಗೊಲೆಯಾಯಿತು. ಈ ಕಗ್ಗೊಲೆಯಿಂದ ದೇಶ ತತ್ತರಿಸಿತು. ಕೇಂದ್ರ ಗೃಹಖಾತೆಯಸಚಿವರಾದ ಜೇಲ್‌ಸಿಂಗರು ಹರಿಜನರ ರಕ್ಷಣೆಗೆ ಶಸ್ತ್ರಗಳನ್ನು ಒದಗಿಸುವ ಭರವಸೆಯಿತ್ತರು. (ಕೇವಲ 24 ಗಂಟೆಯೊಳಗೆ ಅವರ ಡೆಪುಟಿಯವರಾದ ಯೋಗೇಂದ್ರ ಮಕ್ವಾನರವರು ಈ ಭರವಸೆಯನ್ನು ಹಿಂದಕ್ಕೆ ತೆಗೆದುಕೊಂಡರು). ಕಾನೂನು ಮತ್ತು ಶಿಸ್ತನ್ನು ಸರಿಪಡಿಸಲು ಸೋತರೆ ಡಿಸಂಬರ್ 24ರ ವೇಳೆಗೆ ತಮ್ಮ ಹುದ್ದೆಗೆ ರಾಜೀನಾಮೆ ಕೊಡುವುದಾಗಿ ಉತ್ತರಪ್ರದೇಶದ ಮುಖ್ಯಮಂತ್ರಿ ವಿ. ಪಿ. ಸಿಂಗ್ ಪ್ರತಿಜ್ಞೆ ಮಾಡಿದರು.

ಆಗ ನಾಲ್ಕು ಗಂಟೆಯಾಗಿತ್ತು. ದೇವ್ಲೋಲಿ ಗ್ರಾಮದ ಹರಿಜನರ ಬಸ್ತಿಯಿಂದ ಸುಮಾರು 250 ಮೀಟರ್ ದೂರದ ಹೊಲವೊಂದರಲ್ಲಿ ಬಾಲ ಸಹಾಯ್ ಜಾತವ್ ಕೆಲಸಮಾಡುತ್ತಿದ್ದರು. ತಕ್ಷಣ ಸಮವಸ್ತ್ರ ಧರಿಸಿದ್ದ 20 ಜನರ ಗುಂಪೊಂದು ಅವನಿಗೆ ಎದುರಾಯಿತು. ಅವರೆಲ್ಲ ಗ್ರಾಮದ ಕಡೆ ಧಾವಿಸಿದ್ದರು. ಅವರಲ್ಲಿ ಇಬ್ಬರನ್ನು ಗುರುತಿಸಬಹುದಾಗಿತ್ತು. ಅದೇ ಗ್ರಾಮದ ಠಾಕೂರರಾದ ರಾಧೇ ಮತ್ತು ಸಂತೋಷ ಕೆಲವು ವರ್ಷಗಳ ಹಿಂದೆ ಡಕಾಯಿತರಾಗಿದ್ದರು. ಈಗೇನು ಮಾಡುವುದಕ್ಕೆ ಬಂದಿದ್ದಾರೆ ಎಂದು ಅವನಿಗೆ ತಿಳಿಯದಾಯಿತು. ದೇವ್ಲೋಲಿ ಗ್ರಾಮದ ಬಳಿ ಬೆಳಿಗ್ಗಿನಿಂದಲೇ ಸಂತೋಷ ಸುಳಿದಾಡುವುದನ್ನು ಆ ಗ್ರಾಮದ ಅನೇಕ ಜನ ಗಮನಿಸಿದ್ದರು. ಯಾರಿಗೂ ಮುಂಬರುವ ಭಯದ ಕಲ್ಪನೆಯಾಗಿರಲಿಲ್ಲ; ಸಂತೋಷ ಢಕಾಯಿತನಾಗಿದ್ದರೂ ಆ ಗ್ರಾಮದವನೇ ಆದ್ದರಿಂದ ಆಗಾಗ್ಗೆ ಠಾಕೂರ್ ಬಂಧುಗಳನ್ನು ಭೇಟಿ ಮಾಡಲು ಊರಿಗೆ ಬಂದು ಹೋಗುತ್ತಿದ್ದ.

ತನ್ನ ಕೆಲಸದಲ್ಲಿ ಮಗ್ನನಾಗಿದ್ದ ಬಾಲ್ ಸಹಾಯನಿಗೆ, ಆ ಗುಂಪಿನವರೆಲ್ಲ ಶಸ್ತ್ರಾಸ್ತ್ರಗಳಿಂದ ಸಜ್ಜಾಗಿದ್ದದ್ದು ತಿಳಿದು ಭಯವಾಯಿತು. ಆ ಗುಂಪು ಜಾತವ್ (ಹರಿಜನರ) ಬಸಿ (ದೇಶದ ಎಲ್ಲ ಕಡೆ ಇರುವಂತೆ ಜಾತವ ಜನಾಂಗದವರೂ ಹರಿಜನರ ಹಾಗೆ ಊರಹೊರಗೆ ವಾಸಮಾಡುತ್ತಾರೆ)ಯನ್ನು ಸಮೀಪಿಸುತ್ತಿದ್ದಂತೆ ಭಯ ಮತ್ತು ಬೆರಗುಗಳಿಂದ ಬಾಲಸಹಾಯ್ ನಿಂತಲ್ಲೇ ಬೆವತುಹೋದ. ಗುಂಪು ಎರಡಾಯಿತು— ಸಂತೋಷ ಒಂದರ ಮುಂದಾಳತ್ವ ವಹಿಸಿದ— ರಾಧೇ ಇನ್ನೊಂದಕ್ಕೆ ನಾಯಕನಾದ. ಎರಡೂ ಗುಂಪುಗಳು ಬಸ್ತಿಯನ್ನು ಸುತ್ತುವರೆದವು. ಅನಂತರ ನಡೆದ ಕಥೆ ಹೃದಯ ವಿದ್ರಾವಕವಾದಂಥದು.

ಜ್ವಾಲಾಪ್ರಸಾದ್ ತನ್ನ ಮನೆಯಿಂದ ಅನತಿ ದೂರದಲ್ಲೇ ಇದ್ದ. ಶಬ್ದ ಕೇಳಿ ಹಿಂದಕ್ಕೆ ತಿರುಗಿದ. ಅವನು ಹಿಂದಕ್ಕೆ ತಿರುಗುವುದಕ್ಕೆ ಮುಂಚೆ ಎರಡು ಗುಂಡುಗಳು ಅವನ ಒಡಲನ್ನು ಭೇದಿಸಿದ್ದವು— ಒಂದು ಎದೆಯೊಳಕ್ಕೆ ಇನ್ನೊಂದು ತಲೆಗೆ. ಕ್ಷಣಾರ್ಧದಲ್ಲಿ ಅವನು ನೆಲಕ್ಕುರುಳಿ ಹೆಣವಾದ. ಗುಂಡಿನ ಶಬ್ದ ಕೇಳುತ್ತಿದ್ದಂತೆ ಏನಾಗುತ್ತಿದೆ ಎಂದು ನೋಡಲು ಗುಡಿಸಿಲಿನಿಂದ ಹೊರಗೆ ಬಂದ ರಾಮ್‌ಸಿಂಗ್ ಮತ್ತವನ ಬಂಧುಗಳು, ಗೀತಮ್ ಸಿಂಗ್ ಮತ್ತು ಲೀಲಾಧರ್ ಇವರೂ ಗುಂಡಿಗೆ ಗುಂಡಿಗೆ ಕೊಟ್ಟರು.

ಇನ್ನೊಬ್ಬ ಪ್ರತ್ಯಕ್ಷದರ್ಶಿ ಬೈಡ್‌ರಾಮ್ ಪ್ರಕಾರ ಕೊಲೆಗಾರರು ಮನಕ್ ಚಂದನ ಮನೆಗೆ ಹೋಗಿ ಬಾಗಿಲು ಮುರಿದರು. ಮುಂದೇನಾಗುವುದೆಂದು ತಿಳಿದಿದ್ದ ಮನಕ್‌ಚಂದ್ ಓಡಿಹೋಗಿ ಅಡಿಗೆ ಮನೆಯ ಕತ್ತಲ ಮೂಲೆಯಲ್ಲಿ ಅಡಗಿಕೊಂಡ. ಅವನನ್ನ ಪತ್ತೆ ಹಚ್ಚಲು ಢಕಾಯಿತರಿಗೆ ಕಷ್ಟವಾಗಲಿಲ್ಲ. ಮನಕ್‌ಚಂದ್ ಅವರ ಕೃಪೆಯಾಚಿಸಿದ. ಆದರೆ ನೆತ್ತರನ್ನು ಹೀರಲು ಹೊರಟಿರುವವರ ಮನ ಕರಗಲಿಲ್ಲ. ಮನೆಯಿಂದ ಹೊರಗೆ ದರದರ ಎಳೆತಂದು ಅವನನ್ನು ಗುಂಡಿಕ್ಕಿ ಕೊಂದರು.

ಈ ಕರುಣಾಜನಕ ಕಥೆಯನ್ನು ಜಗತ್ತಿಗೆ ಸಾರಲು ಬೈಡ್‌ರಾಮ ಜೀವಸಹಿತ ಉಳಿದನಾದರೂ ಅವನ ಬಂಧು ಬಾಂಧವರು ಸರ್ವನಾಶವಾದರು. ಪಕ್ಕದ ಮನೆಯ ಮಡಿವಾಳನ ಮನೆಯಲ್ಲಿ ಅಡಗಿಕೊಂಡಿದ್ದರಿಂದ, ಅವನ ಸೊಸೆ ಮತ್ತು ಇಬ್ಬರು ಮೊಮ್ಮಕ್ಕಳಾದ ದತಾರಾಮ್(14) ಮತ್ತು ಭರತ್‌ರಾಮ್ 12ರವರ ಕಗ್ಗೊಲೆಯನ್ನು ಕಣ್ಣಾರೆ ಕಂಡ. ಬೈಡ್‌ರಾಮ್‌ನ ಕೆಟ್ಟ ಕನಸಿನ ಅಂತ್ಯ ಇಷ್ಟೇ ಅಲ್ಲ ಅವನ ಸ್ನೇಹಿತನಾದ ಶಿವ್‌ಲಾಲನನ್ನು ಕೊಲೆಗಾರರು ಬೇಟೆಮಾಡುತ್ತಾ ಮನೆಯೊಂದರೊಳಕ್ಕೆ ಎಳೆದೊಯ್ದು 15 ನಿಮಿಷಗಳ ಕಾಲ ಕೂಡು ಹಾಕಿದರು. ಶಿವಲಾಲನನ್ನು ಹೇಗೆ ಹೇಗೆ ಚಿತ್ರ ಹಿಂಸೆಯಿಂದ ಕೊಲೆಮಾಡುತ್ತೇವೆ ಎಂದು ಕಿರುಚುತ್ತಾ ಅವರೆಲ್ಲಾ ಬೊಬ್ಬೆಹಾಕುತ್ತಿದ್ದರು. ತಮ್ಮ ಕೆಲಸ ಪೂರ್ತಿಯಾದ ಮೇಲೆ ಹೊರಗೆ ಎಳೆತಂದು ಅವನಿಗೆ ಗುಂಡಿಟ್ಟರು.

ಈ ಭಯಾನಕ ಕತೆಗಳಿಗೆ ಕೊನೆಯಿಲ್ಲ. ಬದುಕುಳಿದಿರುವ ಪ್ರತಿಯೊಬ್ಬ ಜಾತವನೂ ಒಂದೊಂದು ಸಂಕಟ ಕತೆಯನ್ನು ಹೇಳುತ್ತಾನೆ. ಎಲ್ಲರಿಗಿಂತಲೂ ಅತ್ಯಂತ ದುಃಖಕಾರಿಯಾದ ಕತೆಯನ್ನು ಮುದುಕ ಲಾಪೂರಿಸಿಂಗ್ ಹೇಳುತ್ತಾರೆ. ಕೊಲೆಗಾರರು ಬೇಟೆಯಾಡುವ ಸಮಯದಲ್ಲಿ ಅವನೂ ಹೊಲದಲ್ಲಿ ಕೆಲಸ ಮಾಡುತ್ತಿದ್ದ. ತನ್ನ ಹೆಂಡತಿ ಮಕ್ಕಳು ಅರಚಾಡುವುದನ್ನು ಕೇಳಿ ಗುಡಿಸಿಲಿನತ್ತ ಧಾವಿಸಿದ. ಅವನು ಕಂಡ ದೃಶ್ಯ ಅವನನ್ನು ನಡುಗಿಸಿತು. ಮಗವೊಂದರ ಹಿಂದೆ ಅಡಗಿ ಕುಳಿತು ತನ್ನ ಕುಟುಂಬ ವರ್ಗದ ಎಂಟು ಜನರು ಒಬ್ಬೊಬ್ಬರಾಗಿ ಕೊಲೆಯಾಗುವುದನ್ನು ವೀಕ್ಷಿಸಿದ. ಅವರಲ್ಲಿ ತನ್ನ ಒಬ್ಬ ಮಗ ಮಾತ್ರ ಜೀವಸಹಿತ ಉಳಿದಿದ್ದಾನೆ; ಆದರೆ ಅವನೂಸಹ ಪ್ರಾಣ ಭಯದಿಂದ ತನ್ನ ಇಳಿ ವಯಸ್ಸಿನ ಅಪ್ಪನನ್ನು ಬಿಟ್ಟು ತಲೆ ತಪ್ಪಿಸಿಕೊಂಡಿದ್ದಾನೆ.

## ದೇವ್ಲೋಲಿ ನರಬಲಿ

ಎದ್ದು ಕಾಣುತಲಿರುವುದು ದೇವ್ಲೋಲಿ
ಸುಡುವ ಶತಮಾನದ ನನ್ನವರ ಬಲಿ
ಎಲ್ಲವೂ ಸಾಂಕೇತಿಕ ನುಡಿಯಲ್ಲಿ
ಮೂಡುವುದು ನೋವಿನ ಧ್ವನಿಯಲ್ಲಿ.

ನನ್ನೂರ ಸುತ್ತಲೂ ಕತ್ತಲೂ ಕವಿದಿದೆ.
ಮನುಜರಿದ್ದರು ಕಾಡಾಗಿ
ಅಲ್ಲಿ ನೋವು ನರಳಾಟ ಕೇಳುತಿದೆ
ನನ್ನರ್ಥ ಮಿದುಳು ಕತ್ತಲೊಳಗೆ
ಮಾತಾಡ ತೊಡಗಿದೆ.

ಯಾಕೆಂದರೆ, ಈಗ
ಅದಕ್ಕೆ ಬೆಲೆ ಕುದುರುತಿದೆ.
ಕತ್ತಲೆಯ ಮಾತೇಕೆ ಎನ್ನುವಿರಾ ?
ಬೆಳಕಿಲ್ಲದ ಊರೊಳಗೆ ನಾ ಹುಟ್ಟಿದ್ದು
ಕತ್ತಲೆಯಾದರೇನಾಯಿತೀಗ,
ಇನ್ನರ್ಥ ಮಿದುಳೊಳಗೆ ಬೆಂಕಿಯಿಲ್ಲವೆ ?
ದೇವ್ಲೋಲಿ ಸುಟ್ಟ ಜನರ ಹಾದಿಗೆ
ಕೊಂಡವಾಗುವ ಸರದಿಯಿಲ್ಲವೆ ?

ಎಂದೋ ಬೆಂಕಿಗೆ ಬಾಡಿದ ಹೂ ಮೊಗದಲಿ
ಬಿಡದೆ ಕಾಡಿದ ನೋವು
ಹತ್ತಿಕ್ಕಿ ಮಾತಾಡುವ ಸೇಡಿನ ಕಿಡಿ
ಇಜ್ಜಲಾಗುತಿದೆ ಎನ್ನುವಿರಾ ?

ನನ್ನ ನಿಮ್ಮ ಹುಟ್ಟೆ
ಪ್ರತ್ಯಾರ್ಥಿ ರೋಧನ ಸುತ್ತೆಲ್ಲಾ ಹರಡಿ
ನನ್ನೆದೆಯಲ್ಲಿ ಕರಗಿ ಉಸಿರಾಗಿದೆ.
ಈ ಕತ್ತಲೆಯ ಜನನಾಡಿ
ತುಂಬೆಲ್ಲಾ ಭಾನಗಡಿ.

—ನಂಜನಹಳ್ಳಿ ನಾರಾಯಣ

**ಸಂಡೇ ಪತ್ರಿಕೆಗೆ (ಡಿಸೆಂಬರ್ 6) ಉದಯನ್ ಶರ್ಮಾ ಅವರು ಮಾಡಿದ ಪ್ರತ್ಯಕ್ಷದರ್ಶಿ ವರದಿಯ ಕನ್ನಡಾನುವಾದ ಇದು. ಅನುವಾದಕರು ಸಿ.ನಾಗಣ್ಣ**

ಕೊಲೆಗಾರರು ಗ್ರಾಮವನ್ನು ದಾಳಿಮಾಡಿದಾ ಕ್ಷಣದಿಂದಲೂ ಕಿಷನ್ ಲಾಲ್ ಕೂಡ ಮರೆಯಲ್ಲಿ ಕುಳಿತು ಎಲ್ಲವನ್ನೂ ನೋಡುತ್ತಿದ್ದ. ಸಂತೋಷ ಮತ್ತು ಕೆಲವರು ತನ್ನ ಮನೆಕಡೆ ಬರುವುದನ್ನು ಕಂಡ; ತನ್ನ ಸಂಸಾರ ವರ್ಗದವರನ್ನೆಲ್ಲ ಅವರು ಧ್ವಂಸಮಾಡುತ್ತಿರುವುದು ಕಾಣಿಸಿತು. ಹಸುಳೆಗಳನ್ನು ಅಂತರಿಕ್ಷಕ್ಕೆ ಎಸೆದು ಭೂಮಿಗೆ ಬೀಳುವುದರೊಳಗೆ ಅವರನ್ನು ಗುಂಡಿಕ್ಕಿ ಕೊಲ್ಲುವ ದೃಶ್ಯ ಇಂದಿಗೂ ಅವನ ಮೈಯಲ್ಲಿ ಯಮನಡುಕವುಂಟುಮಾಡುತ್ತಿದೆ.

ಐದು ಜನ ಮಹಿಳೆಯರೂ, ಎಂಟು ಜನ ಮಕ್ಕಳೂ (ಅವರಲ್ಲಿ ಐದು ಜನರು 13ವರ್ಷ ವಯಸ್ಸಿಗಿಂತಲೂ ಎಳೆಯರು) ಸೇರಿದಂತೆ ಒಟ್ಟು 24 ಜನರ ಕಗ್ಗೊಲೆ ಕೇವಲ ಒಂದು ಗಂಟೆಯೊಳಗೆ ನಡೆದುಹೋಯಿತು. ಹೆಣಗಳೆಲ್ಲ ದಿಕ್ಕಾಪಾಲಾಗಿ ಬಿದ್ದು ಊರನ್ನೇ ಸ್ಮಶಾನಮಾಡಿದವು. ತಮ್ಮ "ಭರ್ಜರಿ ಬೇಟೆ"ಯನ್ನು ಆಚರಿಸಲು ಉತ್ಸುಕರಾದ ಕೊಲೆಗಾರರು ಪಕ್ಕದ ಶಿವ ದೇವಾಲಯವೊಂದರಲ್ಲಿ ಬಿಡಾರ ಬಿಟ್ಟು ಸರಿರಾತ್ರಿಯವರೆಗೆ ಮೋಜು ಮಾಡಿದರು. (ಆ ಗ್ರಾಮದ ಠಾಕೂರರು ಅವರಿಗೆ ಸಹಾಯಕರಾಗಿದ್ದರು). ಊರಿನಿಂದ ತೆರಳುವ ಮುನ್ನ ಸಂತೋಷ ತನ್ನ ಎಚ್ಚರಿಕೆಯನ್ನು ಸಾರಿದ: "ಈಬಾರಿ ಕೇವಲ ಕುರಿಮರಿಗಳನ್ನು ನೂತ, ಬಲಿತೆಗೆದ ಕೊಂಡಿದ್ದೇವೆ. ಇನ್ನು ಮುಂದಿನಕೆಲಸ ನಿಜವಾದ ಆಸಾಮಿಗಳನ್ನು ಬೇಟೆಯಾಡುವುದು". ಈ ಕರುಣಾಜನಕ, ಭಯಾನಕ ಘಟನೆ ಸುತ್ತೆಂಟು ಗ್ರಾಮಕ್ಕೆ ಹರಡಿದಾಗ ದುಃಖಸಾಗರದಲ್ಲಿ ಮುಳುಗಿದ್ದ ಗ್ರಾಮದತ್ತ ಎಲ್ಲ ಕಡೆಯಿಂದ ದಾರಿಗಳು ವೈತಳೆದವು.

ಈ ಕಗ್ಗೊಲೆಗೆ ಪ್ರಚೋದನೆ ಏನು? ಈ ಸಂಘರ್ಷದ ಆದಿಯನ್ನು 1972ರ ಪಂಚಾಯತಿ ಚುನಾವಣೆಯಲ್ಲಿ ಗುರುತಿಸಬೇಕಾಗುತ್ತದೆ. ಆ ಗ್ರಾಮದ ಠಾಕೂರ್ ಜನಾಂಗದ ಫತೇ ಸಿಂಗ್ (ಅವನು "ಗ್ರಾಮ ಪ್ರಧಾನ"ನೂ ಕೂಡ) ಚುನಾವಣೆಯಲ್ಲಿ ಸೋತ; ಹಿಂದುಳಿದ ಜನಾಂಗದವನಾದ ನಹರ್‌ಸಿಂಗ್ ಲೋಧಾ, ಜಾತವ್ ಜನಾಂಗದವರ ಬೆಂಬಲದಿಂದ ಗೆದ್ದ. ಫತೇ ಸಿಂಗ್‌ನ ದಬ್ಬಾಳಿಕೆ, ಶೋಷಣೆಗಳಿಂದ ಜಾತವರೆಲ್ಲ ರೋಸಿಹೋಗಿದ್ದರು. ಜಾತವರ ಜಮೀನನ್ನು ಠಾಕೂರರು ಆಕ್ರಮಿಸಿಕೊಂಡಾಗ ನ್ಯಾಯದೊರಕಿಸಿಕೊಡುವುದರಲ್ಲಿ ಅವನು ಮೋಸಮಾಡಿದ್ದ. ಇದ್ದರಿಂದ ಚುನಾವಣೆಯಲ್ಲಿ ನಹರ್‌ಸಿಂಗ್‌ನನ್ನು ಗೆಲ್ಲಿಸಿದ್ದರು; ಪರಿಣಾಮವಾಗಿ ಠಾಕೂರರ ಏಕಸ್ವಾಮ್ಯ ಇಲ್ಲವಾಯ್ತು. ಈ ಸೋಲನ್ನು ಠಾಕೂರರು ಒಪ್ಪಿಕೊಳ್ಳದಾದರು. ಮತ್ತು ಇಷ್ಟು ವರ್ಷಗಳಿಂದ ದಬ್ಬಾಳಿಕೆಗೆ ತುತ್ತಾದ ಜಾತವರು ಇನ್ನು ಮುಂದೆ ತಮ್ಮ ಜಮೀನಿಗೆ ಒಡೆಯರಾಗುತ್ತಾರೆಂಬ ಸತ್ಯವೂ ಅವರಿಗೆ ಪಥ್ಯವಾಯಿತು.

ಈಗ ನಹರ್‌ಸಿಂಗ್ "ಗ್ರಾಮಪ್ರಧಾನ"ನಾದ. 1973ರಲ್ಲಿ ಠಾಕೂರರ ನಿಷ್ಠೂರವಾದ ಎಚ್ಚರಿಕೆಯನ್ನೂ ಧಿಕ್ಕರಿಸಿ, 'ಗ್ರಾಮ್‌ಸಭಾದ' ಜಮೀನನ್ನು ಏಳುಜನ ಭೂರಹಿತ ಹರಿಜನರಿಗೆ ಹಂಚಿದ. ಮತ್ತೆ 1979ರಲ್ಲಿ ಇಂಥವೇ ಮತ್ತೊಂದು ಪ್ರಸಂಗ ನಡೆಯಿತು. ಇದರಿಂದ ಠಾಕೂರರು ರೊಚ್ಚಿಗೆದ್ದರು. ಸಮಯ ಕಾಯುತ್ತ ಕುಳಿತವರು, ಹರಿಜನರಿಗೆ ತಕ್ಕ ಪಾಠ ಕಲಿಸುವ ಯೋಚನೆಯಲ್ಲಿ ಸಿದ್ಧರಾದರು. ಅಂತೂ ಅವರಿಗೆ ಸಮಯ ಸಿಕ್ಕೇಸಿಕ್ಕಿತು; ರಾಧೇ ಮತ್ತು ಸಂತೋಷ ರಣರಕ್ಕಸರ ಹಾಗೆ ಆ ಗ್ರಾಮದ ದಿಗಂತದಲ್ಲಿ ಮೂಡಿನಿಂತರು.

ಆ ಗ್ರಾಮದವರೇ ಆದ ರಾಧೇ ಮತ್ತು ಸಂತೋಷ ಢಕಾಯಿತತನವನ್ನು ಕೆಲವು ವರ್ಷಗಳಿಂದ ಸ್ವೀಕರಿಸಿದ್ದರೆಂದು ಈಗಾಗಲೇ ತಿಳಿಸಿದೆ. ಅವರು ಬೇಟೆ ಮಾಡಿ ಗಳಿಸಿದ್ದನ್ನೆಲ್ಲ ಒಯ್ಯಲು

[13ನೇ ಪುಟ ನೋಡಿ]

## ಪೋಲೀಸರೂ ಮತ್ತು ದೇವೋಲಿ ಢಕಾಯಿತರೂ

ಢಕಾಯಿತರು ಸೇಡು ತೀರಿಸಿಕೊಳ್ಳುವ ನೆಪದಲ್ಲಿ 24 ಹರಿಜನರನ್ನು ಕೊಂದರೆ ಡಕಾಯತರನ್ನು ಹಿಡಿಯುವ ನೆಪವಲ್ಲಿ ಈ ಘಟನೆಯಾದ ವೇಳೆ (ಡಿ 16ರ ಇಂಡಿಯನ್ ಎಕ್ಸ್‌ಪ್ರೆಸ್ ಸುದ್ದಿಯ ಪ್ರಕಾರ) ಪೊಲೀಸರು 127 ಮಂದಿ ಅಮಾಯಕರನ್ನು ಕೊಂದು ಹಾಕಿದ್ದಾರೆ. ಈ ಕೊಲೆಗಳಲ್ಲಿ ಇನ್ನೆಷ್ಟು ಜಾತವ್ ಹರಿಜನರು ಬಲಿಯಾಗಿದ್ದಾರೋ ಲೆಕ್ಕಹಾಕಬೇಕು.

ಸಂತೋಷ್ ಠಾಕೂರನ ಮೇಲೆ ಕಣ್ಣಿಟ್ಟ ಪೋಲೀಸರು, ಅವರಲ್ಲೂ ಸಿವಿಲ್ ಡ್ರೆಸ್ಸಿನಲ್ಲಿದ್ದ ಪೋಲೀಸರು ಯಾವುದೇ ಮಾರಾಮಾರಿಯೂ ಇಲ್ಲದೆ ಡಿಸೆಂಬರ್ 14ರಂದು ಅವನನ್ನು ಹಿಡಿದರು. ನಂತರ 4 ಢಕಾಯಿತರು ಸಿಕ್ಕಿಕೊಂಡರು. ಡಕಾಯಿತರನ್ನು ಇಷ್ಟು ಸುಲಭವಾಗಿ ಹಿಡಿಯಲು ಸಾಧ್ಯವಾಗುವುದಾದರೆ 127ಮಂದಿ ಅಮಾಯಕ ಜನರನ್ನು ಪೋಲೀಸರು ಗುಂಡಿಕ್ಕಿ ಕೊಲ್ಲುವ ಆಗತ್ಯವೇನಿತ್ತು. ಸಂತೋಷನನ್ನು ಪೋಲೀಸರು ಸೆರೆ ಹಿಡಿದಾಗ ಅವನು ತನ್ನ ಜಾತಿ ಬಂಧುವಾದ ಮುಖ್ಯಮಂತ್ರಿಗೆ ಬರೆದ ಕಾಗದದ ಸಾರಾಂಶ ಪೋಲೀಸರ ಕುತಂತ್ರವನ್ನು ಸಾದರಪಡಿಸುತ್ತದೆ.

ಡಕಾಯಿತ ಸಂತೋಷನಿಂದ ಮುಖ್ಯಮಂತ್ರಿಗೊಂದು ಪತ್ರ:

"ನೀವು ಪೋಲೀಸರನ್ನು ನಂಬಬೇಡಿ. ಯಾಕೆಂದರೆ ಅವರು ಮೊದಲಿನಿಂದಲೂ ಭ್ರಷ್ಟರು ಹಾಗೂ ಹೇಡಿಗಳು. ಇದುವರೆಗೆ ಅವರು ನಡೆಸಿರುವ ಮಾರಾಮಾರಿಗಳಲ್ಲಿ (encounters) ಶೇ. 95 ಬರೀ ಬೊಗಳೆ ಮಾರಾಮಾರಿಗಳು. ಅಂದರೆ ಅವರು ಮಾಡುತ್ತಿರುವುದು ಇಷ್ಟೆ. ಬಡವರ ಮನೆಗಳಿಗೆ ನುಗ್ಗಿ ಜನರನ್ನು ಕೊಂದು ಹಾಕಿಮಾರಾಮಾರಿಗಳಲ್ಲಿ ಕೊಂದೊ ಅಂತ ಹೇಳಿಕೊಳ್ಳುತ್ತಾರೆ. ಡಕಾಯಿತರ ಜೊತೆಗೆ ನಿಜವಾಗಿ ನಡೆದ ಮಾರಾಮಾರಿಗಳಲ್ಲಿ ಪೋಲೀಸರೆ ಹೆಚ್ಚು ಗಾಯಗೊಂಡಿದ್ದಾರೇ ಹೊರತು ಡಕಾಯಿತರಲ್ಲ. ನಿಜವಾದ ಸಂಗತಿ ಎಂದರೆ ಇವರು ಒಂದು ಇಲಿಯನ್ನು ಕಂಡರೂ ಹೆದರಿ ಓಡುವ ಜನ. ಸಿ.ಬಿ.ಐ. ತನಿಖೆ ನಡೆಸಿದರೆ ನನ್ನ ಮಾತಿನ ಸತ್ಯ ಗೊತ್ತಾಗುತ್ತದೆ''.

ಸಂತೋಷ ಬರೆದ ಕಾಗದ ಅರ್ಥೈಸುವಂತೆ ಉತ್ತರ ಪ್ರದೇಶ ಸರ್ಕಾರ ಹೇಳಿಕೊಂಡಿದೆ: ಇದುವರೆಗೆ 4626 ಡಕಾಯಿತರನ್ನು ಕೊಂದು 8000 ಮಂದಿ ಡಕಾಯಿತರನ್ನು ಸೆರೆ ಹಿಡಿದಿದ್ದೇವೆಂದು. ಡಕಾಯಿತರನ್ನು ಕೊಲ್ಲುವುದು ಅಂದರೇನು ಅನ್ನುವ ವಿವರವನ್ನು ಸಂತೋಷ ತನ್ನ ಕಾಗದದಲ್ಲಿ ಸರಿಯಾಗಿಯೇವಿವರಿಸಿದ್ದಾನೆ.

### ಗದ್ದುಗೆ ಉಳಿಯುವ ಪ್ರಶ್ನೆ

ಮುಖ್ಯಮಂತ್ರಿ ಘೋಷಿತ ಡಕಾಯಿತರ್ರು ಪೋಲೀಸರಿಗೆ ಸಿಕ್ಕಿ ಬೀಳುವ ನಾಟಕಗಳನ್ನು ಮಾಡಿ ಜನರ ಮನಸ್ಸನ್ನು ರಂಜಿಸಿ ಹೋಗುತ್ತಾರೆ. 5 ಮಂದಿ ಡಕಾಯಿತರನ್ನು ಹಿಡಿದು ಜಯಭೇರಿ ಹೊಡೆಯುವ ಉತ್ತರ ಪ್ರದೇಶದ ಮುಖ್ಯಮಂತ್ರಿ ವಿ.ಪಿ. ಸಿಂಗ್ ತಾನು ಇನ್ನು ರಾಜೀನಾಮೆ ಕೊಡಬೇಕಾಗಿಲ್ಲ ಅನ್ನುವುದನ್ನು ಸೂಕ್ಷ್ಮವಾಗಿ 'ಪೋಲೀಸರೆ ನೀವು ಒಳ್ಳೆಯ ಕೆಲಸ ಮಾಡಿದಿರಿ, ಅಂತ ಅವರನ್ನು ಹೊಗಳುವುದರ ಮೂಲಕ ತಾನು ಉಳಿದು ಕೊಂಡಿದ್ದಾನೆ. ಒಟ್ಟಾರೆ ಅಲ್ಲಿಯ ಹರಿಜನರಿಗೆ ಜೀವ ಉಳಿಸಿಕೊಳ್ಳುವುದು ಪ್ರಶ್ನೆಯಾಗಿದ್ದರೆ ಇಲ್ಲಿ ಇವನು ಗದ್ದುಗೆ ಉಳಿಸಿಕೊಳ್ಳುವ ಪ್ರಶ್ನೆಗೆ ಪರಿಹಾರ ಕಂಡುಕೊಂಡಿದ್ದಾನೆ.

—ಕ್ಷೀರಸಾಗರ

## ಅನುಭವದ ಗಣಿಯಿಂದ

**ನಮ್ಮಲ್ಲಿ ರೂಢಿಗತವಾಗಿರುವ ಸಂಪ್ರದಾಯಗಳು ತನ್ನ ಹೊಟ್ಟೆ ಒಳಗೆ ಮನುಷ್ಯರನ್ನು ವಿಂಗಡಿಸುವ ಕ್ರೂರ ಗರಗಸ ಇಟ್ಟುಕೊಂಡು ಕತ್ತರಿಸುತ್ತ ಬಂದಿರುವುದು. ಕೀಳರಿಮೆಯನ್ನೆ ಆರಾಧನೆಗೆ ಒಳಪಡಿಸುವ ಹಿಂದೂ ಸಮಾಜದ ಇಂಥ ಸಂಪ್ರದಾಯಗಳನ್ನು ಬುಡಮಟ್ಟ ಕೀಳದ ಹೊರತು ಇಲ್ಲಿನ ಮನುಷ್ಯರು ಮನುಷ್ಯರಾಗರು.**

# ಅಯ್ನೋರು ಮತ್ತು ಕುರುಬರ ಕುಸಂಬಂಧ

ಕುಳಗಟ್ಟೆ ಮಂಜಪ್ಪ

ಈ ಅಯ್ನೋರುಗಳು ಸಮಾಜದಲ್ಲಿ ಸಕಲರಿಂದಲೂ 'ಗುರುಗಳು' ಅಂತ ಮಾನ್ಯರಾಗಿ ವಿಜೃಂಭಿಸುತ್ತಿರುವರು. ದೇವರು, ಶಾಸ್ತ್ರ, ಪುರಾಣ, ವೇದ, ಸಂಪ್ರದಾಯ ಅರಿಷಡ್ವರ್ಗ ಇತ್ಯಾದಿ ಕಲ್ಪನೆಗಳೇ ಇವರನ್ನು ಪ್ರಸ್ತುತ ಸಮಾಜದಲ್ಲಿ ಮರಿದೇವರಂತೆ ಮೆರೆಯಲು ಮಾಡಿರುವ ಬಂಡವಾಳ. ಇದು ನಿಮಗೂ ಗೊತ್ತೇ ಇದೆ. ಕುರುಬ ಜಾತಿಯವರು ಅಯ್ನೋರುಗಳ ದೈನಂದಿನ ಕ್ರಿಯೆಗಳಲ್ಲಿ ಸೇವಕರಂತೆ ವರ್ತಿಸಿ ಸಾಮಾಜಿಕ ವಿಧಿಗಳಲ್ಲಿ ಪಾಲ್ಗೊಳ್ಳುತ್ತಾರೆ. ಆದರೆ ಈ ಅಯ್ನೋರುಗಳ ಕುಬುದ್ಧಿಯಿಂದ ಕರುಬರಿಗೆ ದಕ್ಕಿರುವುದು (ಸೇವಕಗೆ ಪರದೆ ಎಳೆದು) ಶಿಷ್ಯಸ್ಥಾನ. ಸಾಮಾನ್ಯವಾಗಿ ಈ ಅಯ್ನೋರುಗಳ ಮದುವೆಯಲ್ಲಿ ಕುರುಬರೇ ಅನಿವಾರ್ಯವಾಗಿ ಹೋಗಿ ಗುರುಗಳ ಮಠದ ಮುಂದೆ ಹಂದರ (ಚಪ್ಪರ) ಹಾಕಿ–ಅಂಗಣ ಮತ್ತಿತರ ಸ್ಥಳಗಳನ್ನು ಸ್ವಚ್ಛಗೊಳಿಸಿ ಬರಬೇಕು. ಕಾರಣ ಅಯ್ನೋರುಗಳೆಲ್ಲಾ ಗುರುಗಳು. ಕುರುಬರು ಅಯ್ನೋರುಗಳ ಶಿಷ್ಯರೆಂಬುವಂಥಾದ್ದು. ಕುರುಬರ ಸಂಪ್ರದಾಯದ ವಿಧಗಳಲ್ಲಿ ಈ ಶಿಷ್ಯರ ಮೇಲೆ ಕಾಲಿಟ್ಟು ದಕ್ಷಿಣೆ ಇಸಿದುಕೊಳ್ಳಲು ಈ ಅಯ್ನೋರುಗಳೇ ಆಗಬೇಕು. ಇವರ ಹೊರತು ಬೇರೆ ಮಂದಿ ನಿಷಿದ್ಧ. ವಯಸ್ಸಿನಲ್ಲಿ ತಮಗಿಂತಲೂ ಎಷ್ಟೇ ಕಿರಿಯವನಿರಲಿ ಆತನೂ ಒಬ್ಬ ಗುರುವೇ. ಆತನ ಕಾಲಿಗೆ ಬೀಳಲು [ದಕ್ಷಿಣೆ ಕೊಟ್ಟು] ಮುಗ್ಧ ಜನರು ಇದ್ದೇ ಇದ್ದಾರೆ. ಇದೇ ಅಯ್ನೋರು ಹಾಗು ಕುರುಬ ಜಾತಿಗಳ ಮಧ್ಯೆ ಏರ್ಪಟ್ಟಿರುವ ಆ ಕೆಟ್ಟ ಸಂಬಂಧ.

ಈ (ಅ)ನೀತಿಯಂತೆ ನಮ್ಮೂರಿನ ಒಬ್ಬ ಅಯ್ನೋರನ ಮನೆಯಲ್ಲಿ ಆತನ ಮಗಳ ಮದುವೆ ಏರ್ಪಾಡಾಗಿತ್ತು. 1980ನೇ ಇಸವಿಯ ಮೇ ತಿಂಗಳಿರಬಹುದು. ಕೋಲಕಾರನೆಂಬ ಪದ ನಿಮಿತ್ತ ಕುರುಬನೊಬ್ಬನ ಮೂಲಕವೇ ಸರಿ ಎಲ್ಲಾ ಕುರುಬರ ಮನೆಗೂ ಕರೆ ಹೋಯಿತು. ಮನೆಗೊಬ್ಬರು ಕಡ್ಡಾಯವಾಗಿ ಹೋಗಲೇಬೇಕು. ನಮ್ಮ ಅಪ್ಪನಿಗೆ ದಣಿವಾಗಿದ್ದರಿಂದ ನಮ್ಮ ಮನೆಯನ್ನು ಪ್ರತಿನಿಧಿಸುವ ಸಲುವಾಗಿ ನಾನೇ ಹೋಗಬೇಕಾಯಿತು. ಹೋದೆ! ಕ್ಷಣಾರ್ಧದಲ್ಲಿ ಅಯ್ನೋರ ಮನೆ ಮುಂದೆ ಜನ ಜಮಾಯಿಸಿದ್ದರು. ಬಂದವರಲ್ಲಿ ನನ್ನಂತೆ ಹುಡುಗರು ಮತ್ತು ಮುದುಕರು- ಮಧ್ಯವಯಸ್ಕರು ಇದ್ದರು. ಕೆಲವೇ ಕ್ಷಣಗಳಲ್ಲಿ ಅಯ್ನೋರ ಮನೆ ಮುಂದೆ ಚಪ್ಪರ ಸಿದ್ಧವಾಗಿ ಅಂಗಳ ಚೊಕ್ಕವಾಗಿ ಎಲ್ಲವೂ ಥಳಥಳಗುಟ್ಟಿತು. ಕೆಲಸದ ಮಧ್ಯೆ ಅಯ್ನೋರು ಮತ್ತವರ ಮಕ್ಕಳು 'ಕೆಂಚ ಇಲ್ಲೊಡಿಯೋ' 'ಮಾರ ಇದ್ನ ಸರ್ಯಾಗ್ ಕಟ್ಟೊ' ಎಂದು ಮುಂತಾಗಿ ನಿಂತು ನಿರ್ದೇಶಿಸುತ್ತಿದ್ದರು- ತಾವು ಒಂಚೂರು ಕೈಮುಟ್ಟಿ, ಸಹಕರಿಸದೆ. ನಾವು ಕೆಲಸ ಮಾಡುವಾಗ ತಮ್ಮ ಕೆಲಸದ ನಿಮಿತ್ತ ಹೊರಗೆ ಹಾಯುತ್ತಿದ್ದ ದಪ್ಪ ದೇಹದ ಬಿಳಿ ತೊಗಲಿನ ಅಯ್ನೋರುಗಳ ಹರೆಯದ ಹುಡುಗಿಯರು ನನ್ನಂತ ಹುಡುಗರ ದೃಷ್ಟಿ, ಅತ್ತ ಹೊರಳುವಂತೆ, ಕಣ್ಣರಳುವಂತೆ ಮಾಡುತ್ತಿದ್ದರು. ಕೆಲಸ ತೀರಿದ ಬಳಿಕ ಎಲ್ಲರಿಗೂ ಚಹ ಕೊಡುವುದಕ್ಕಾಗಿ ಅಯ್ನೋರು ಎಲ್ಲರಿಗೂ ಪಡಸಾಲೆಗೆ ಕರೆದರು. ಎಲ್ಲರೂ ಸಟ ಸಟ ನಡೆದರು.

ನಾನೂ ಹಿಂದಿನಿಂದ ಪಡಸಾಲೆಯೊಳಕ್ಕೆ ಹೋದೆ. ಎಲ್ಲರೂ ಮೌನವಾಗಿ ಭಕ್ತಿಯಿಂದ ಕಾದು ಕುಳಿತಿದ್ದರು ನೆಲದಮೇಲೆ. ಎದುರಿಗೇ ನಾಲ್ಕಾರು ಕುರ್ಚಿಗಳಿದ್ದವು. ಒಂದು ಮಂಚವೂ ಇತ್ತು. ಎಲ್ಲವೂ ಖಾಲಿ ಇವೆ. ಈ ಜನ ಕೆಳಗೆ ಕುಂತಿದ್ದಾರೆ. ನನ್ನ ಜನರ ಕೀಳರಿಮೆ ನನಗೆ ಬೇಸರಿಕೆ ತರಿಸಿತು. ನಾನೇ ಹಟದಿಂದ ಧೈರ್ಯ ವಹಿಸಿ ಹೋಗಿ ಒಂದು ಕುರ್ಚಿಯ ಮೇಲೆ ಕುಂತೆ. ನಾನು ಕೂತ ಕೂಡಲೆ ಅಯ್ನೋರು ಮತ್ತು ನನ್ನ ಜನರ ಬೆರಗುಗಣ್ಣುಗಳು ನನ್ನನ್ನು ಚುಚ್ಚಿ ಇರಿಯುವಂತೆ ಧಾವಿಸಿದವು. ನಾನು ವಿಚಲಿತನಾಗಲಿಲ್ಲ. ಯಾರಿಗೂ ಕೇರ್ ಮಾಡದೆ ಅಫ್ ಕೋರ್ಸ್ ಅಂದುಕೊಂಡೆ. ಅಷ್ಟರಲ್ಲಿ ಅಯ್ನೋರುಗಳು (ಬು)ಗುಸು ಗುಡಲಾರಂಭಿಸಿದ್ದರು ನನ್ನ ವರ್ತನೆ ಸಹ್ಯವಾಗದೆ. ಅಷ್ಟರಲ್ಲಿ ನನ್ನ ನಡತೆಯಿಂದ, ಅಯ್ನೋರ ಮನಸ್ಸಿಗೆ ಅಸಮಾಧಾನವಾಗಿದೆ ಎಂಬುದನ್ನರಿತ ನನ್ನ ಜಾತಿಯ ಹಿರಿಯನೊಬ್ಬ ನನ್ನ ಮೇಲೆ ಸಿಟ್ಟಾಗಿ 'ಏಯ್, ಇಳಿದು ಕೆಳಗ್ ಕುಂತ್ಗಾ ಬಾ. ಯೇಟುದ್ದ ಅದೀಯಾ.... ಯೇಟಾಕಂದು ಒದ್ದಿಯಾ.... ಇದೇನನೀ ಕಲ್ತಿರೋದು. ಅವರ್ಯಾರು ನಾವ್ಯಾರು ....ಆಟು ತಿಳೀದ? ಇಳುದ್ ಬಾರಾ ಮರ್ಯಾದಿಂದ' ಎಂಬುದಾಗಿ ಗದರಿಸಿದ. ಕೆಲವರು ಕಿಸಕ್ಕೆಂದರು. ಅಯ್ನೋರು ಮುಖದಲ್ಲಿ ವ್ಯಂಗ್ಯದ ನಗುವು ತಾಳಿದರು. ಅವಮಾನದಿಂದ ನನ್ನ ಮುಖ ಕೆಂಪೇರತೊಡಗಿತ್ತು. ನನ್ನ ಜಾತಿಯವರ ಕೀಳರಿಮೆ ಬಗ್ಗೆ ಮತ್ತಷ್ಟು ಅಸಹ್ಯವುಂಟಾಯಿತು. ಅಯ್ನೋರ ಅಟ್ಟಹಾಸದ ಘನವಂತಿಕೆ ವಿರುದ್ಧ ಮನಸ್ಸಿನಲ್ಲಿ ಒಳಗೊಳಗೆ ಕುದಿದೆ. ಕಾಳ್ಕಿಗಟ್ಟಿ. ಪ್ರಾಸಂಗಿಕವೊ ಅಪ್ರಾಸಂಗಿಕವೊ ನನ್ನ ರೋಷದ ಕಿಡಿ ಉದುರಿಸಿಯೇ ಬಿಟ್ಟೆ. 'ಅಯ್ನೋರುಗಳೇನ್ ಮ್ಯಾಲಿಂದ ಇಳಿದ್ ಬಂದಾರಾ ? ಅವ್ರೂನಮ್ಮಂಗೆ ಮನುಷ್ರೆ' !'ನನಗಾದಂಥ ಅವಮಾನ ಅದರಿಂದುಂಟಾಗಿರುವ ರೋಷ. ನನ್ನ ಜಾತಿಯವರ ಕೀಳರಿಮೆ ಬಗ್ಗೆ ನಮಗಿರುವ ಅಸಮಾಧಾನ ಜೊತೆಗೆ ಸಿಟ್ಟು ಎಲ್ಲವೂ ವ್ಯಕ್ತವಾಗುವ ಧಾಟಿಯಲ್ಲಿ ನಾನು ಕುಳಿತಲ್ಲಿಂದಲೇ ಅಬ್ಬರಿಸಿದೆ ನನ್ನ ಮಾತನ್ನು ಅಲ್ಲಿರುವ ಯಾರೂ ಅರ್ಥಮಾಡಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಎಲ್ಲಾ ಜಡಚರಿತರಾಗಿದ್ದರು. ನನ್ನ ಮಾತು-ಕೃತಿಯಿಂದ ಒಳಗೊಳಗೆ ಕುಪಿತನಾಗಿದ್ದ ಒಬ್ಬ ಅಯ್ನೋರು ಹೊರಗೆ ನನ್ನನ್ನೇ ಸಮಾಧಾನಿಸುವ ಅಭಿನಯ ಮಾಡುತ್ತ 'ಅದೆಲ್ಲಾ ಯಾಕೆ ನೋಡಪ್ಪಾ. ನಾವು - ನೀವು ಹಿಂಗೆ ನಡ್ಕೊಂತಿರೋದು ಈವತ್ತು ನಿನ್ನೆದಲ್ಲ ಇದು ತಲಾತಲಾಂತರದಿಂದ ನಡೆದು ಬಂದಿರೋದು. ಹಿರಿಯೋರು ಮಾಡಿ ಹೋಗಿದಾರೆ ಇದ್ರಂಗ ನಡೀರಿ ನಿಮಗೆ ಒಳ್ಳೇದಾಗುತ್ತೆ ಅಂತ! ನಡ್ಕನಾದು ಬಿಡಾದು ನಂ-ನಿಮ್ಮಿಷ್ಟ! ನಾವೇನ್ ಈ ಶಾಸ್ತ್ರದಿಂದ್ಲೇ ಹೊಟ್ಟೆ ತುಂಬ್ಸಿಕಬೇಕ? ನಾವೂ ನಂನಮ್ಮ ಕೆಲ್ಸ-ಬೊಗ್ಸೆ ಮಾಡಿಕ್ಯಾಂತೀವಿ. ನಮ್ಗೂ ಕಾಟ ತಪ್ತು ಅಂತ. .!' ನಾನು ಆ ಅಯ್ನೋರ ಮಾತಿನಿಂದ ಅಸಹನೆಗೀಡಾಗಿ ಚಡಪಡಿಸುತ್ತ 'ಆ ನಿಂ ಶಾಸ್ತ್ರಾನ ಬೆಂಕಿ ಹಚ್ರಿ' ಅಂತ ಸಿಡುವಾಗಿ ಗುಡುಗಿದೆ. ತಕ್ಷಣವೇ 'ನಿಮ್ಮಂಥೋರಿಗೆ ಬೆಂಕಿ ಹಚ್ಚಿದರೆ........ ಸುಂಕುತ್ಕಳ ಪ್ಯಾಲೆ' ಎಂದು ಅದುವರೆಗೆ ಮಾತಾಡದೆ ಸುಮ್ನಿದ್ದ ನನ್ನ ಜಾತಿಯವನೇ ಒಬ್ಬ ತನ್ನ ವಾಗ್ಬಾಣ ಬಿಟ್ಟ. ನಮ್ಮ ವಾದಾಟ ಕಂಡು ಅದುವರೆಗೆ ಸುಮ್ಮನಿದ್ದವರು – ಒಳಗೇ ಮುಸಿ ಮುಸಿ ನಗುತ್ತಿದ್ದವರು ಈಗ ಗಟ್ಟಿಯಾಗಿ ಖೊಕ್ ಖೊಕ್-ಎಂದು ಗೊಳ್ಳೆಂತ ನಕ್ಕೇನಕ್ಕರು. ನಾನು ಬೆವತು ಹೋದೆ. ಅವಮಾನದಿಂದ ನನ್ನ ಮುಖ ಮತ್ತಷ್ಟು ಕೆಂಪಡರಿತು. ಅವರುಗಳ ಜತೆ ವಾದ ಮುಂದುವರಿಸಲು ನನಕೆ ಅರ್ಥ ಸಿಗಲಿಲ್ಲ.

[೧೦ನೇ ಪುಟ ನೋಡಿ]

# ಮೃಗಾಲಯಗಳಾಗಿರುವ ಜೈಲುಗಳು

ಮುಳ್ಳೂರು ನಾಗರಾಜ್

ಮೊನ್ನೆ ಮೈಸೂರು ಜಿಲ್ಲಾ ಕೇಂದ್ರ ಸೆರಮ ೆ ಹೋಗಿದ್ದೆ. ಸ್ನೇಹಿತರೊಬ್ಬರ ನೆರವಿನಿಂದ ಲವು ಖೈದಿಗಳನ್ನು ಖುದ್ದು ಮಾತಾಡಿಸುವ ವಕಾಶ ದೊರಕಿತು. ಇಲ್ಲಿ ಖೈದಿಗಳನ್ನು ಮನು ರಂತೆ ನಡೆಸಿಕೊಳ್ಳುತ್ತಿಲ್ಲ. ಅವರ ಸ್ಥಿತಿ ಪ್ರಾಣಿ ಗಿಂತಲು ಕೀಳಾಗಿದೆ.

ಸಾಮಾನ್ಯ ಮನುಷ್ಯನಿಗೆ ಸಿಗುವ ಸೌಲಭ್ಯ ು ಖೈದಿಯಾದವನಿಗೂ ತಲುಪುವಂತಿರಬೇಕು. ವರೆ ಇಲ್ಲಿ ಅದಕ್ಕೆ ತದ್ವಿರುದ್ಧವಾದ ಸ್ಥಿತಿಯಿದೆ. ಾನು ಕೆಲವು ಖೈದಿಗಳನ್ನ ಮಾತಾಡಿಸಿದಾಗ ವರು ಭಯ ಮತ್ತು ದೈನ್ಯತೆಯಿಂದ ಇರುವ ಚಾರವನ್ನು ಹೇಳಿದರೂ ತಮ್ಮ ಹೆಸರುಗಳನ್ನು ಲ್ಲೂ ಪ್ರಕಟಿಸದಂತೆ ಬೇಡಿಕೊಂಡರು.

"ನಿಮಗೆ ಏನೇನು ಸೌಲಭ್ಯ ಕೊಡ್ತಾರೆ?" ಾನು ಒಬ್ಬನನ್ನು ಪ್ರಶ್ನಿಸಿದಾಗ ಆತ ಉತ್ತರಿಸ ಲ್ಲ; ಬದಲಾಗಿ ಮತ್ತೊಬ್ಬ:

**ಭಾರತೀಯ ಜೈಲುಗಳು ಕೈದಿಗಳ ಆಹಾರ ಬಟ್ಟೆಗಳನ್ನು ಕಳ್ಳಸಂತೆಯಲ್ಲಿ ಮಾರುವುದರಿಂದ ಹಿಡಿದು ಅವರ ಕಣ್ಣು, ಉಗುರು ಕೀಳುವಲ್ಲಿ, ಮಹಿಳೆಯ ಮೇಲೆ ಅತ್ಯಾಚಾರವೆಸಗುವಲ್ಲಿ, ಕೊಲೆ ಮಾಡುವುದರಲ್ಲಿ ಅಲ್ಲದೆ ಮಾನಸಿಕ ವಾಗಿಯೂ ಊನಗೊಳಿಸುವಲ್ಲಿ ಯಶಸ್ವಿಯಾಗುತ್ತಿವೆ. ಜೈಲಿನವರು ಕೊಡು ವ ಹಿಂಸೆ, ಸತ್ವಹೀನ ಆಹಾರಗಳಿಂದಾಗಿ ಕೈದಿಗಳು ಮಾನವೀಯ ಪರಿಸರ ದಿಂದ ವಂಚಿತರಾಗುತ್ತಿದ್ದಾರೆ.**

"ಇಲ್ಲಿ ಸೌಲಭ್ಯನು ಇಲ್ಲ, ಮಣ್ಣೂ ಇಲ್ಲ. ಮ್ಮನ್ನ ತಿರುಗಾಡಕು ಬುಡಕಿಲ್ಲ. ಕೈಕಾಲೆಲ್ಲ ಡ್ದು ಕಟ್ಟೋಗದೆ ಸ್ವಾಮಿ".

ನಾನು ಸುಮ್ಮನೆ ಇದ್ದೆ. ಅಷ್ಟರಲ್ಲಿ ಮತ್ತೊ ಮುದುಕ ಮಾತಾಡಿದ.

"ನೋಡಿ ನಂಬಟ್ಟೆ ಎಷ್ಟು ಕೊಳೆ ಆಗವೆ. ವುನ್ನ ಒಗೆಯಕು ಬುಡಕಿಲ್ಲ. ಸ್ನಾನ ಮಾಡಕು ಡಕಿಲ್ಲ. ನಮ್ಮ ಸ್ಥಿತಿ ನಾಯಿಸ್ಥಿತಿ ಆಗದೆ ೋಡ್ರಿ".

ಇಂಥವಕ್ಕೆ ಪರಿಹಾರ ಏನು ಅಂತ ಯೋಚಿಸ್ತ ದ್ದೆ.

"ಯಾಕೆ ನೀವೆಲ್ಲ ಒಟ್ಟಾಗಿ ಪ್ರತಿಭಟಿಸ ಬಾರ ?"

"ದೊಣ್ಣೆ ತಕ್ಕಂಡು ಹೊಡೀತಾರೆ. ಮೂಳೆ ುರ್‍ದಾಕ್ತಾರೆ ಪೋಲೀಸ್ನೋರು".

ನಿಮ್ಮ ಕಡೆಯವರು ಯಾರೂ ನೋಡೋಕೆ ರಲ್ವ?

"ಹ್ಞೂಂ ಸ್ವಾಮಿ ಬತ್ತಾರೆ".

"ಸೆಲ್‌ಗೇ ಬಂದು ನೋಡ್ಬಹುದಾ?

"ಇಲ್ಲ ಗೇಟ್ ಹತ್ರ ನಮ್ಮನ್ನ ಕರಕೊಂಡೋ ಗ್ತಾರೆ. ಆಚೆ ಅವ್ರು ಈಚೆ ನಾವ್ರು.

"ಮನೆಯಿಂದ ದುಡ್ಡುಗಿಡ್ಡು ತಿಂಡಿ ತಂದು ಕೊಡಬಹುದಲ್ವ?"

"ನಮ್ಮ ಕೈಗೆ ಕೊಡಂಗಿಲ್ಲ. ಗೇಟ್ನಲ್ಲಿ ಕೊಟ್ಬುಟ್ಟು ಹೋಗ್ತಾರೆ. ಅವ್ರು ನಮಗೆ ಕೊಡಕಿಲ್ಲ. ನಮ್ಮ ದುಡ್ಡು ಕಾಸು ತಿಂಡಿ ಎಲ್ಲನು ಗೇಟ್ನವ್ರೆ ತಿಂದು ನೀರು ಕುಡುದು ಬುಡ್ತಾರೆ."

"ಊಟ ಸಾಲುತ್ತಾ?"

ಸಾಲಕಿಲ್ಲ ಸ್ವಾಮಿ. ನಮಗೆ ತೂಕದ ಪ್ರಕಾರ ಊಟ ಕೊಡ್ಬೇಕು. ಆದ್ರೆ ತೂಕನು ಇಲ್ಲ ಏನು ಇಲ್ಲ. ಊಟದಲ್ಲು ನಾನಾಥರ ಮೋಸ ಮಾಡ್ತಾರೆ. ಯಾಕೇಂತ ಕೇಳುದ್ರೆ ಒಡೀತಾರೆ.

ಇಲ್ಲಿನ ಆಹಾರಪದ್ಧತಿ ಹೀಗಿವೆ. ಪ್ರತಿಯೊಬ್ಬನಿಗೆ ಬೆಳಗಿನ ಗಂಜಿ ೯೦ ಗ್ರಾಮ್.

ಬರಿ ಅನ್ನ ತಿನ್ನುವವರಿಗೆ ೬೭೦ಗ್ರಾಂ ಅನ್ನ ಕೊಡುತ್ತಾರೆ.

ಮುದ್ದೆ ತಿನ್ನುವವರಿಗೆ : ೬೦೦ ಗ್ರಾಂ ಮುದ್ದೆ, ಸಾರು ಎಲ್ಲರಿಗೂ ೨೦೦ಎಂ.ಎಲ್, ವಾರಕ್ಕೊಮ್ಮೆ ಮಾಂಸ ೧೧೫ ಗ್ರಾಂ, ಸಸ್ಯಾಹಾರಿಗಳಿಗೆ : ೧೦೦ ಗ್ರಾಂ ಸಿಹಿತಿಂಡಿ.

ಆದರೆ ತೂಕದ ನಿಯಮದಂತೆ ಯಾವುದನ್ನು ಕೊಡಲ್ಲ ಎಂಬುದು ಖೈದಿಗಳಿಂದ ತಿಳಿದುಬಂತು.

ಒಟ್ಟಾರೆ ಖೈದಿಗಳ ಜೊತೆ ಮಾತುಕತೆಯಿಂದ ತಿಳಿದುದು ಇಷ್ಟು. ಜೇಲಿನ ಪ್ರತಿವಿಭಾಗದಲ್ಲು ಖೈದಿಗಳ ಶೋಷಣೆ ನಡೆದುಕೊಂಡೇ ಬಂದಿದೆ. ಆದರೆ ಇದನ್ನು ಪ್ರಶ್ನಿಸುವವರಿಲ್ಲ. ಖೈದಿಗಳು ಪ್ರಶ್ನಿಸಿದರೆ ಅವರಿಗೆ ಬೆನ್ನು ಮುರಿಯುವ ಹೊಡೆತ ಬೀಳುತ್ತದೆ. ಈ ಜೇಲು ಗೋಡೆಗಳ ನಡುವೆ ಕೊಳೆತುನಿಂತಿರುವ ಪೋಲೀಸ್ ದರ್ಪವನ್ನು ಬಣ್ಣಿಸಲು ಪುಟಗಳು ಸಾಲುವುದಿಲ್ಲ. ಈ ಪೋಲಿಸ್ ಸಂಸ್ಕೃತಿಯನ್ನು ಬದಲಾಯಿಸಿ ಖೈದಿಗಳನ್ನು ಮನುಷ್ಯರಂತೆ ಕಾಣಬೇಕಾದ್ದು ಸರ್ಕಾರದ ಜವಾಬ್ದಾರಿ. ಆದರೆ ಈ ತಲೆಕೆಟ್ಟ ಸರ್ಕಾರ ತನ್ನ ಜವಾಬ್ದಾರಿ ನಿರ್ವಹಿಸಲು ಸಮರ್ಥವಾಗಿದೆಯೆ? ಎಂಬ ಗುಮಾನಿಯೊಡನೆ ನನಗೆ ನಾನೇ ಪ್ರಶ್ನೆಯಾಗಿ ಜೇಲಿನಿಂದ ಹೊರಬಿದ್ದೆ.

## ಹಂದಿಯಾದಳು ಅಬಲೆ !

ವಿಜಾಪುರ ಜಿಲ್ಲೆಯ ಅಲಿಯಾಬಾದ ಎಂಬ ಹಳ್ಳಿಯಲ್ಲಿ ಸುಮಾರು ೨೫ವರ್ಷಗಳ ಹಿಂದೆ ನಡೆದ ಘಟನೆಯಿದು. ಚಿಕ್ಕಹಳ್ಳಿಯ ಸುತ್ತೆಲ್ಲ ಬಯಲು ಪ್ರದೇಶವೇ ಇದ್ದದ್ದರಿಂದ ಹೆಂಗಸರು ಹಗಲು ಹೊತ್ತಿನಲ್ಲಿ ಕಕ್ಕಸಕ್ಕೆ ಹೋಗುವುದು ಅಸಾಧ್ಯವಾಗಿತ್ತು. ನಮ್ಮ ಎದುರಿನ ಮನೆಯ ಹೆಂಗಸೊಬ್ಬಳು ಹಗಲು ಹೊತ್ತಿನಲ್ಲಿ ತೀರ ಅನಿವಾರ್ಯವಾಗಿ ಹಿತ್ತಲಲ್ಲೇ ಮಲವಿಸರ್ಜನೆ ಮಾಡಿ ಬಿಟ್ಟಳು. ಸ್ವಲ್ಪ ಹೊತ್ತಿನಲ್ಲೇ ಗಂಡನಿಗೆ ಇದು ಗೊತ್ತಾಗಿ; ಸಿಟ್ಟಿನ ಭರದಲ್ಲಿ ಜೋರಾಗಿ ಹೊಡೆಯುತ್ತ ಆ ರೀತಿ ಮಾಡಿದ್ದಕ್ಕಾಗಿ ಶಿಕ್ಷೆಯ ರೂಪದಲ್ಲಿ ಮಲ ತಿನ್ನಲು ಒತ್ತಾಯಿಸಿದ. ಇಲ್ಲದಿದ್ದರೆ ಕೊಂದು ಬಿಡುವುದಾಗಿ ಚೀರಾಡಿದ. ಅವಳು ಭಯಭೀತಳಾಗಿ ಅಡಿಕೆ ಗಾತ್ರದಷ್ಟು ತಾನೇ ಹೇತ ಹೇಲನ್ನು ತಿಂದಳು.

ಮುಂದೆ ಊರ ಜನರಿಗೆ ಇದೆಲ್ಲಗೊತ್ತಾಗಿ ಅವನಿಗೆ 'ಹಂದಿಯೊಡನೆ ಬಾಳುವೆ ಮಾಡುವವ'ನೆಂದು ಆರೋಪ ಹೊರಿಸಿ ಸಮಾಜದಿಂದ ಹೊರಗಿಟ್ಟರು. ಕೊನೆಗೆ ಆ ಆರೋಪದಿಂದ ಮುಕ್ತನಾಗಲು ಆತ ತನ್ನ ಹೆಂಡತಿಯನ್ನೇ ಬಿಟ್ಟುಬಿಟ್ಟ.

—ರಮಜಾನ ದರ್ಗಾ

## ತಲ್ಲೀನ ಹಕ್ಕಿಗಳು

ಮೋಡಗಳಿಲ್ಲ ಇಂದು
ತೊಟ್ಟಿವೆ ಕೆಂಬಟ್ಟೆಯ.
ಕೆಂಡದುಂಡೆಯಾಗಿದ್ದಾನೆ ಸೂರ್ಯ
ಮತ್ತೆ ಪ್ರಜ್ವಲಿಸುತ್ತಿದ್ದಾನೆ.
ಆದರೂ ತಲ್ಲೀನವಾಗಿವೆ
ಹಕ್ಕಿಗಳು ಹಾರುವುದರಲ್ಲೇ.

—ಸುಸನ್ ಮಿಹನ್ ದೋಸ್ತ್

[ 1968 ರಲ್ಲಿ ಹುಟ್ಟಿದ ಈಕೆ ಇರಾನದ ಕ್ರಾಂತಿಕಾರಿ ಪ್ರಜ್ಞೆಯ ಪುಟ್ಟ ಕವಯಿತ್ರಿ 4ನೇ ಕ್ಲಾಸಿನಲ್ಲಿ ಓದುವಾಗ ಈ ಕವನ ಬರೆದಿದ್ದಾಳೆ.]

# ದಟ್ಟ ಅರಣ್ಯವಾಗಿರುವ ಜಗತ್ತನ್ನು

ಆಫ್ರಿಕಾದ ಖ್ಯಾತ ಬರಹಗಾರ ಚಿನ
ಬಂದಿದ್ದಾಗ ಅವರೊಂದಿಗೆ ಪೋಲಂಕಿ
ಪರವಾಗಿ ಚರ್ಚಿಸಿದಾಗ ಹೊರಬಂದ ವಿ

ಅಮೆರಿಕದಲ್ಲಿ ನೀಗ್ರೋ ವ್ಯವಸ್ಥೆ, ಭಾರತದಲ್ಲಿ ಅಸ್ಪೃಶ್ಯ ವ್ಯವಸ್ಥೆ ಇದ್ದಹಾಗೆ ಆಫ್ರಿಕದಲ್ಲೂ ಇದೆ. ಆದರೆ ನನಗೆ ಕಂಡಹಾಗೆ ಈ ವ್ಯವಸ್ಥೆ ಗಮನಾರ್ಹವಾಗಿ ಭಿನ್ನವಾದದ್ದು. ವಸು ವ್ಯವಸ್ಥೆ ಅಂತಇದೆ. ಇದು ನಮ್ಮ ನಾಡಿನಲ್ಲಿನ ಇಬೋ ಸಂಸ್ಕೃತಿಯ ವಿಶಿಷ್ಟ ವಿದ್ಯಮಾನ. ಮೂಲತಃ ವಸು ಜನರಿಗೆ ವಿಶಿಷ್ಟ ಸ್ಥಾನಗಳಿದ್ದವು. ದೇವರ ಸೇವೆಗೆ ಮುಡಿಪಾದ ಯಾವುದೇ ವ್ಯಕ್ತಿಗೆ ಇಂಥ ಪ್ರತಿಷ್ಠಿತ ಹಕ್ಕುಗಳು ತಾನಾಗೇ ಬರುತ್ತಿದ್ದವು. ಈಗ ವಸುವಿನ ಸ್ಥಾನ ಪಲ್ಲಟವಾಗಿದೆ ಆದರೂ ಅವನ ಹಕ್ಕುಗಳ ಅವಶೇಷ ಉಳಿದುಕೊಂಡಿದೆ. ಅವನ ಮೇಲೆ ಯಾರೂ ಕೈ ಮಾಡುವಂತಿಲ್ಲ ಹೊಡೆಯುವಂತಿಲ್ಲ, ಅವನಿಗೆ ದೈಹಿಕವಾಗಿ ಯಾವುದೆ ಅಘಾತವನ್ನು ಮಾಡುವಂತಿಲ್ಲ. ಯಾಕೆಂದರೆ ಅವನು ದೇವರ ಕೆಲಸದವನು. ಅಂಥದೇನಾದರೂ ಸಂಭವಿಸಿ ಅವನ ಒಂದು ತೊಟ್ಟು ರಕ್ತ ನೆಲಕ್ಕೆ ಬಿದ್ದರೆ ಗಂಭೀರ ಪರಿಣಾಮಗಳಾಗುವ ಭಯವಿದೆ. ಅಂತ ಪ್ರಕರಣ ಉದ್ಭವಿಸಿದರೆ ಅದನ್ನು ಸರಿಪಡಿಸಲು ವಿಶೇಷವಾದ ವಿಸ್ತಾರವಾದ ದುಬಾರಿಯಾದ ಶಾಂತಿ ಕ್ರಮುಗಳನ್ನು ಕೈಗೊಳ್ಳಬೇಕು. ಈ ಅರ್ಥದಲ್ಲಿ ವಸು ಜನರಿಗೆ ವಿಶಿಷ್ಟಸ್ಥಾನವಿದೆ. ಆದರೆ ಇಂದು ಯಾವುದೊ ಕಾರಣದಿಂದ ಅವನ ಸ್ಥಾನ ಪತನವಾಗಿದೆ. ಐರೋಪ್ಯರು ಆಫ್ರಿಕಕ್ಕೆ ಕಾಲಿಡುವ ಕಾಲಕ್ಕಾಗಲೇ ವಸು ಒಂದರ್ಥದಲ್ಲಿ ಸಮಾಜ ಬಾಹಿರನೇ ಆಗಿದ್ದ. ಆದರೆ ಆಗಲೂ ಅವನಿಗೆ ಹೊಡೆಯುವಂತಿರಲಿಲ್ಲ. ಅವನ ಕೈಯಲ್ಲಿ ಕೆಲಸ ಮಾಡಿಸುವಂತಿರಲಿಲ್ಲ, ಅವನ ಜೊತೆ ವಿವಾಹ ಸಂಬಂಧ ಮಾಡುವಂತಿರಲಿಲ್ಲ, ಅವನು ದೇವರ ಗುಲಾಮ.

ವಸುವನ್ನು ನಿಮ್ಮ ದೇಶದ ಅಸ್ಪೃಶ್ಯನಿಗೆ ಹೋಲಿಸುವುದಕ್ಕಿಂತ ನಿಮ್ಮ ಬ್ರಾಹ್ಮಣನೊಂದಿಗೆ ಹೋಲಿಸಬಹುದೇನೊ. ನೀವೇ ಹೇಳಿದಂತೆ ನಿಮ್ಮ ಬ್ರಾಹ್ಮಣ ಭೂಸುರ. ಅವನು ಶ್ರಮ ಕೆಲಸಗಳನ್ನು ಮಾಡುವುದಿಲ್ಲ. ಅವನನ್ನು ಮುಟ್ಟುವಂತಿಲ್ಲ ಅವನನ್ನು ಕೊಂದರೆ ಆ ಪಾಪವನ್ನು ತೊಳೆಯಲೇ ಆಗದು. ಅದ್ದರಿಂದ ಬ್ರಾಹ್ಮಣ ಮತ್ತು ವಸು ವ್ಯವಸ್ಥೆಗಳ ನಡುವೆಯೇ ಹೆಚ್ಚು ಸಾಮ್ಯಗಳಿದ್ದಂತಿವೆ.

ನೀವು ಈಗ ತಾನೆ ನಿಮ್ಮಲ್ಲಿ ಇರುವ ದೇವದಾಸಿ ವ್ಯವಸ್ಥೆ ಬಗ್ಗೆ ಹೇಳಿದಿರಿ. ಅವರೂ ದೇವರ ಗುಲಾಮರು, ದೇವರಿಗೆ ಬಿಟ್ಟವರು. ಅವರ ಸ್ಥಾನವೂ ಪತನವಾಗಿ ಈಗ ವೇಶ್ಯೆಯರಾಗಿದ್ದಾರೆ. ಇಲ್ಲೂ ಕೆಲವು ಸಾಮ್ಯಗಳನ್ನು ಗುರ್ತಿಸಬಹುದು.



ಅಮೆರಿಕದ ಪರಿಸ್ಥಿತಿಯನ್ನು ಗಮನಿಸಿ. ಅದು ಸಂಪೂರ್ಣವಾಗಿ ಆರ್ಥಿಕವಾದದ್ದು, ಜನಾಂಗಿಕವಾದದ್ದು. ಕಪ್ಪು ಜನರನ್ನು ಪ್ರಾಣಿಗಳಂತೆ ದುಡಿಸಿಕೊಳ್ಳಲು ಕೊಂಡೊಯ್ದದ್ದಷ್ಟೆ. ಆಗಿನ ಕಾಲದಲ್ಲಿ ಟ್ರ್ಯಾಕ್ಟರುಗಳಂತ ಯಂತ್ರಗಳಿದ್ದಿದ್ದರೆ ಗುಲಾಮಗಿರಿಯೇ ಇರುತ್ತಿರಲಿಲ್ಲ. ಮತೀಯವಾದಂಥ ಪರಿಕಲ್ಪನೆಯಿಂದ ಅಮೆರಿಕದಲ್ಲಿನ ವ್ಯವಸ್ಥೆ ಉದ್ಭವವಾಗಿಲ್ಲ.

ನಾನು ನಿಮ್ಮ ಹಳ್ಳಿಯೊಂದನ್ನು ನೋಡಿದೆ. ಅಂಥದೇ ಹಳ್ಳಿಗಳು ಭಾರತದ ತುಂಬ ಇವೆ ಎಂದು ನನಗೆ ಗೊತ್ತು. ಇಲ್ಲಿ ಅಸ್ಪೃಶ್ಯರನ್ನು ನಿಮ್ಮ ವ್ಯವಸ್ಥೆ ನೋಡುವ ತರಕ್ಕೂ ಕಪ್ಪು ಜನರನ್ನು ಅಮೆರಿಕದಲ್ಲಿ ನೋಡುವ ತರಕ್ಕೂ ಅರ್ಥಾನುಸಂಬಂಧವೇ ಇಲ್ಲ. ಕುಕ್ಲಕ್ಸ್‌ಕ್ಲ್ಯಾನ್‌ನಂಥ ಸಂಘ ಇದ್ದಂಥ ಪರಸ್ಪರ ಕಡು ವೈರದ ಕಾಲದಲ್ಲೂ ಕಪ್ಪುಜನರಿಗೆ ಮಾನವತೆಯನ್ನು ನಿರಾಕರಿಸಿರಲಿಲ್ಲ. ಗುಲಾಮಗಿರಿಯ ಕಾಲದಲ್ಲಿ ಅವನು ಆರ್ಥಿಕ ಸರಕಾಗಿದ್ದ ಅಷ್ಟೇ. ಬಿಳಿಯ ಜನಕ್ಕೆ ಕಪ್ಪು ಜನ ಜೀವಂತವಾಗಿರುವುದು ಅಗತ್ಯವಾಗಿತ್ತು. ಕಪ್ಪುಮನುಷ್ಯ ತೊಂದರೆ ಕೊಡುವವ ಪುಂಡ ಎನ್ನಿಸಿದರೆ ಮಾತ್ರ ನಿಯಂತ್ರಣ ಇಟ್ಟುಕೊಳ್ಳಲು ಅವನನ್ನು ಇಲ್ಲವಾಗಿಸುತ್ತಿದ್ದರು ಅಷ್ಟೆ. ಆ ವ್ಯವಸ್ಥೆಯ ನಡುವೆಯೂ ಕೆಲವು ಮಾನವೀಯ ಸಂಬಂಧಗಳು ಇರುತ್ತಿದ್ದವು. 'ದಿ ರೂಟ್ಸ್' ಕಾದಂಬರಿ ಮತ್ತು ಸಿನಿಮಾದಲ್ಲಿ ಇದನ್ನು ಸ್ಪಷ್ಟವಾಗಿ ಚಿತ್ರಿಸಲಾಗಿದೆ. ಅಮೆರಿಕದಲ್ಲಿಯ ಕಪ್ಪು ಮನುಷ್ಯ ಪೂರ್ಣ ಕಪ್ಪಲ್ಲ. ತಲೆತಲೆಮಾರಿನಿಂದ ಸಂತಾನ ಸಂಕರವಾಗಿದೆ. ಕಪ್ಪು ಮತ್ತು ಬಿಳಿಯ ಜನರ ನಡುವೆ ಲೈಂಗಿಕ ಸಂಬಂಧಗಳು ಯಥೇಚ್ಛವಾಗಿ ಆಗಿವೆ. ಅದರ ಬಗ್ಗೆ ಯಾರೂ ಹೆಚ್ಚು ಮಾತಾಡುವುದಿಲ್ಲ- ಬಹಿರಂಗವಾಗಿ ಇವನ್ನು ಪ್ರೋತ್ಸಾಹಿಸದಿದ್ದರೂ ರಹಸ್ಯವಾಗಿ ಇಂಥ ಸಂಬಂಧಗಳು ಆಗಿ ಭದ್ರನೆಲೆಯೂರಿ ಮಿಶ್ರ ಜನಾಂಗಗಳನ್ನು ಸೃಷ್ಟಿಸಿವೆ.

ಕಪ್ಪು ಜನರಲ್ಲಿ ಗುಲಾಮಗಿರಿಯ ದಾಸ್ಯದ ನೊಗ ಹೊತ್ತವರು ಗಂಡಸರೇ. ಹೆಂಗಸರಿಗೆ ರಕ್ಷಣೆ ಇತ್ತು. ಯಜಮಾನ ಪ್ಲಾಂಟರ್‌ಗಳೊಡನೆ ಅವರಿಗೆ ಹೆಚ್ಚಿನ ಸಂಪರ್ಕವಿತ್ತು. ಬಿಳಿಯ ಮಕ್ಕಳಿಗೆ ಕಪ್ಪು ಹೆಂಗಸರೇ ಎಷ್ಟೋಸಲ ಮೊಲೆಯೂಡಿಸುತ್ತಿದ್ದಳು. ಇಂಥ ಸರ್ವೇ

# ನವೀಯಗೊಳಿಸಬೇಕು : ಅಚೀಬೆ

ೆ, ಇತ್ತೀಚೆಗೆ ಮೈಸೂರಿಗೆ
ೂರ್ತಿಯವರು ಪಂಚಮದ

ದಮನ್ಯ ಪರಿಸ್ಥಿತಿ ಇದ್ದು ಅಲ್ಲಿ ಎಡವಟ್ಟಾಗಿದೆ. ಮತ್ತು ಬಿಳಿ ಜನರ ಮಧ್ಯೆ ಕಹಿ ಇರಲು ಣವೆಂದರೆ, ಇಂಥ ಮಾನವೀಯ ಸಂಬಂಧಕ್ಕೆ ೀಹವಾಗಿದೆ ಎನ್ನುವುದು. ಆದ್ದರಿಂದ ್ರಿಕಾ, ಭಾರತ ಮತ್ತು ಅಮೆರಿಕಗಳಲ್ಲಿನ ತನ ಪರಿಸ್ಥಿತಿ ಒಂದೇ ಬಗೆಯದಲ್ಲ. ಮೂಲ ಭಿನ್ನತೆಗಳಿವೆ ಆಫ್ರಿಕದಲ್ಲಿನ ವಸುಗಳ ಕೊನೆಯದಾಗಿ ನಾನು ಹೇಳುವುದೇನೆಂದರೆ ವ್ಯವಸ್ಥೆ ಈಗ ಇಲ್ಲವೇ ಇಲ್ಲ. ನನ್ನ ಸ್ವಂತ ಯಲ್ಲಿ ಈಗ ಒಂದೇ ಒಂದು ವಸು ಕುಟುಂಬ ಜನ ಅವರು ಯಾರು ಅವರ ಸ್ಥಾನ ಸ್ತ್ರ ಎಂದು ಕಥೆ ಹೇಳುತ್ತಾರೆ ಅಷ್ಟೆ. ಆದರೆ ಜನರೂ ಇತರರಂತೆಯೇ ಬದುಕುತ್ತಿದ್ದಾರೆ. ರಿಂದ ನನಗನ್ನಿಸುವುದೇನೆಂದರೆ ಆಫ್ರಿಕಾದಲ್ಲಿ ಶ್ರೀಮಂತಿಕೆಯ ಆಧಾರದ ಮೇಲೆ ನೇರ ವರ್ಗ ವ್ಯವಸ್ಥೆಯೊಂದನ್ನೇ ಉಳಿಸಿ ಸ್ಸುತ್ತೇವೆ. ಭಾರತದಲ್ಲಿನ ಪರಿಸ್ಥಿತಿ ವಿಶಿಷ್ಟ ದ್ದು. ವರ್ಗ ಸಮಸ್ಯೆಗಿಂತ ಜಾತಿ ಸಮಸ್ಯೆ ಭದ್ರವಾದದ್ದು. ಇವಕ್ಕೆಲ್ಲ ಮೂಲಕಾರಣ ನನಲ್ಲಿ ಮೂಲಭೂತವಾದ ತಾರತಮ್ಯ ತ್ರಿ, ವ್ಯತ್ಯಾಸಗಳನ್ನು ಗುರ್ತಿಸಿ ರೂಪಿಸಿ ನ್ನು ತನ್ನ ಬಲವನ್ನಾಗಿ ಮಾಡಿಕೊಳ್ಳುವ ್ಯಸ. ಇದು ಮಾನವನ ಸ್ವಭಾವ. ಅದರಲ್ಲಿ ನುನಿಗೆ ಇದು ವಿಶಿಷ್ಟವಾದದ್ದು. ಅದು ಅವನ ದ ಉತ್ತಮತೆಯ ಕಲ್ಪನೆಯ ಪ್ರಭಾವ.

ನೇ ಇರಲಿ, ಅಮೆರಿಕದಲ್ಲಿನ ದಲಿತರು ಹೇಗೆ ರಾದರು ಭಾರತದಲ್ಲಿನ ದಲಿತರು ಹೇಗೆ ರಾದರು ಎಂಬುದು ಈಗ ಮುಖ್ಯವಲ್ಲ. ರಣಗಳನ್ನು ಮರೆಯಬೇಕು. ನಾವೆಲ್ಲ ೀ ಈ ಭೂಮಿಯ ಕಳಂಕಿತ ಜೀವಿಗಳು ಎಂದು ಡು ಒಟ್ಟಾಗಿ ಹೋರಾಡಬೇಕು. ಹೀಗೆಮಾ ಗ ಮಾತ್ರ ಏನನ್ನಾದರೂ ಸಾಧಿಸಬಹುದು.

ಬಗೆಯ ಪ್ರಜ್ಞೆಯನ್ನು ಬೆಳೆಸಲು ಯಾವ ಕಾವ್ಯ, ಜರ್ನಲ್ ಇತ್ಯಾದಿಗಳು ಹೇಗೆ ಪರಿ ಕಾರಿಯಾದಾವು ಎಂದು ಕೇಳುತ್ತಿದ್ದೀರಿ. ವಿದರಾಗಿ ಬರಹಗಾರರಾಗಿ ನಾವು ನಮ್ಮ ಲ್ಲಿ ಸಾಧ್ಯವಾಗುವ ಕಾವ್ಯವನ್ನೇ ಬಳಸ ಾಗುತ್ತದೆ.

ಮ್ಮಲ್ಲಿ ದೇವನೂರು ಮಹಾದೇವ ಅತ್ಯಂತ ್ಯ ಹಾಗೂ ಪರಿಣಾಮಕಾರಿ ಬರಹಗಾರ ತ್ತೀರಿ. ಸ್ವಾತಂತ್ರ್ಯ ಬಯಸುವ, ದಾಸ್ಯ ಮುಕ್ತಿ ಹೊಂದಬೇಕೆನ್ನುವ ಜನ ಎಲ್ಲೇ ಅವರಿಗೆ ಅವನ ಬರಹಗಳು ಮುಟ್ಟುವ ವ್ಯವಸ್ಥೆ ಆಗಬೇಕು. ಅವನ ಸಣ್ಣ ಕತೆ ಅಥವಾ ಕವನಗಳು ಇಂಗ್ಲಿಷ್ ಭಾಷಾಂತರಗಳೇನಾದರೂ ಇದ್ದರೆ ಅವನ್ನು ನನ್ನ 'ಒಕೀಕೆ' (okike) ಯಲ್ಲಿ ಸಂತೋಷದಿಂದ ಪ್ರಕಟಿಸುತ್ತೇನೆ. ಇದೊಂದೇ ನಮ್ಮಲ್ಲಿನ ಆಯುಧ. ಅದು ಪರಿಣಾಮಕಾರಿ ಹಾಗೂ ಪ್ರಯೋಜನಕಾರಿ.

ನೀವು ಹೇಳಿದ ಮಹಾದೇವನ ಕಥೆಯಲ್ಲಿ ಕ್ರಾಂತಿಯ ಸೂಚನೆಗಳಿವೆ. ಅಮೆರಿಕದ ಕಪ್ಪು ಜನರ ಕಥೆಗಳಿಗೂ ಇದಕ್ಕೂ ಸಾಮ್ಯವಿದೆ. ಸ್ತ್ರೀಯರ ಪಾತ್ರವನ್ನು ಗಮನಿಸಿ ತಮ್ಮ ಗಂಡಸರು ವಿಷಣ್ಣತೆಯ ಕೂಪದಲ್ಲಿ ಮುಳುಗಿದ್ದಾಗ ಅವರನ್ನು ಮೇಲೆತ್ತಿದವರು ಅವರು. ಜೀವನದ ಹೊರೆಯ ಭಾರಕ್ಕೆ ಗಂಡಸು ಕುಸಿದುಕೂತಾಗ ಹೊರೆಯನ್ನು ಹೊತ್ತವರು ಅವರು. ಗಂಡಸು

[14 ನೇ ಪುಟಕ್ಕೆ]

ಮೂರನೆಯ ಜಗತ್ತಿನ ಅತ್ಯಂತ ಪ್ರಮುಖ ಸಾಹಿತ್ಯಕ ವಕ್ತಾರ ಎಂದರೆ ಚಿನುಅ ಅಚೀಬೆಯಲ್ಲದೆ ಬೇರಲ್ಲ. ನೈಜೀರಿಯಾದ ಒಗಿಡಿಯಲ್ಲಿ ೧೬ನೇ ನವೆಂಬರ್ ೧೯೩೦ರಲ್ಲಿ ಜನಿಸಿದ ಇವರು ಇಬಡಾನ್‌ನ ವಿಶ್ವವಿದ್ಯಾನಿಲಯ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮುಗಿಸಿ ಬಿ.ಎ.ಪದವಿಯನ್ನು ೧೯೫೩ರಲ್ಲಿ ಲಂಡನ್ನಿನಲ್ಲಿ ಪಡೆದರು. ಸಾರ್ವಜನಿಕ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ವಿವಿಧ ಉನ್ನತ ಸ್ಥಾನಗಳಲ್ಲಿ ವೃತ್ತಿಜೀವನ. ನೈಜೀರಿಯನ್ ಬ್ರಾಡ್‌ಕಾಸ್ಟಿಂಗ್ ಕಾರ್ಪೋರೇಷನ್ ನಿರ್ದೇಶಕ (೧೯೬೦-೭೦), ಅಮೆರಿಕೆಯ ಮಸಾಚುಸೆಟ್ಸ್ ವಿಶ್ವವಿದ್ಯಾನಿಲಯದಲ್ಲಿ ಸಂದರ್ಶಕ ಪ್ರಾಧ್ಯಾಪಕ (೧೯೭೨-೭೫), ಹೈನೆಮನ್ ಆಫ್ರಿಕನ್ ಬರಹಗಾರರ ಕೃತಿಮಾಲೆಯ ಸ್ಥಾಪಕ ಸಂಪಾದಕ (೧೯೭೦ರಿಂದ).

ಹೊಸ ಬರವಣಿಗೆಗೆ ಅತ್ಯಂತ ವ್ಯಾಪಕವಾಗಿ ಖ್ಯಾತವಾಗಿರುವ ನೈಜೀರಿಯನ್ ಜರ್ನಲ್ ಒಕೀಕೆಯ ಸಂಪಾದಕರು ಇವರು. ಇವರಿಗೆ ಬಂದ ಪಾರಿತೋಷಕ ಪುರಸ್ಕಾರಗಳು ವಿಪುಲ: ಮಾರ್ಗರೆಟ್ ವ್ರಾಂಗ್ ಸ್ಮಾರಕ ಬಹುಮಾನ(೧೯೫೯), ನೈಜೀರಿಯ ರಾಷ್ಟ್ರೀಯ ಟ್ರೋಫಿ (೧೯೬೦), ರಾಕ್‌ಫೆಲರ್ ಫೆಲೋಶಿಪ್ (೧೯೬೦), ಯುನೆಸ್ಕೋ ಫೆಲೋಶಿಪ್ (೧೯೬೩), ಜಾಕ್ ಕ್ಯಾಂಪ್‌ಬೆಲ್ ಪಾರಿತೋಷಕ (೧೯೬೫), ಕಾಮನ್ ವೆಲ್ತ್ ಕಾವ್ಯ ಪಾರಿತೋಷಕ (೧೯೭೩), ಸ್ಕಾಟ್ಲೆಂಡಿನ ಸ್ಟರ್ಲಿಂಗ್ ವಿಶ್ವವಿದ್ಯಾನಿಲಯದಿಂದ ಡಿ. ಲಿಟ್ ಪದವಿ.

ಇವರ ವಿಳಾಸ. Institute of African Studies,
University of Nigeria
Nsukka, NIGERIA, AFRICA

ಇವರ ಪ್ರಖ್ಯಾತ ಕಾದಂಬರಿಗಳು : ೧. ಥಿಂಗ್ಸ್‌ಫಾಲ್ ಅಪಾರ್ಟ್ (೧೯೫೮), ೨. ನೋ ಲಾಂಗರ್ ಅಟ್ ಈಸ್ (೧೯೬೦), ೩. ಆ್ಯರೋ ಆಫ್ ಗಾಡ್ (೧೯೬೪) ೪. ಎ ಮ್ಯಾನ್ ಆಫ್ ದಿ ಪೀಪಲ್ (೧೯೬೬). ಇತರ ಕೃತಿಗಳು : ೧. ದಿ ಸ್ಯಾಕ್ರಿಫಿಶಿಯಲ್ ಎಗ್ ಅಂಡ್ ಅದರ್ ಸ್ಟೋರೀಸ್ (೧೯೬೨), ೨. ಗರ್ಲ್ಸ್ ಅಟ್ ವಾರ್ (೧೯೭೨) ೩. ಬಿವೇರ್ ಸೋಲ್ ಬ್ರದರ್ ಅಂಡ್ ಅದರ್ ಪೊಯೆಮ್ಸ್ (೧೯೭೧), ೪. ಕ್ರಿಸ್‌ಮಸ್ ಇನ್ ಬಯಫ್ರಾ ಅಂಡ್ ಅದರ್ ಪೊಯೆಮ್ಸ್ (೧೯೭೩) ಮತ್ತು ಮಕ್ಕಳ ಪುಸ್ತಕಗಳು.

"ನಾನು ರಾಜಕೀಯ ಬರಹಗಾರ. ಜಗತ್ತಿನ ಎಲ್ಲ ಜನರ ಬಗ್ಗೆ ಗೌರವವನ್ನು ಪೋಷಿಸುವಂಥ ಜನಾಂಗಿಕ ಹಾಗೂ ಸಾಂಸ್ಕೃತಿಕ ಗಡಿರೇಖೆಗಳಿಗೆ ಅತೀತವಾದಂಥ ಸಾರ್ವಜನಿಕ ಮಾನವೀಯ ಸಂವಹನ ಮಾಧ್ಯಮಕ್ಕೆ ಸಂಬಂಧಿಸಿದ್ದು ನನ್ನ ರಾಜಕಾರಣ. ಆದ್ದರಿಂದ ನನ್ನ ಮೂಲಭೂತ ಪ್ರಯತ್ನ ಎಂದರೆ ನನ್ನ ಹತ್ತಿರದ ನೆರೆಹೊರೆಯಲ್ಲಿ ಸಂವಹನ ಮಾಧ್ಯಮಗಳನ್ನು ಸ್ಪಷ್ಟವಾಗಿ ರೂಪಿಸುವುದು."

"ನಾನು ಹುಟ್ಟಿದ್ದು ವಸಾಹತು ಯುಗದಲ್ಲಿ. ರಾಷ್ಟ್ರೀಯ ಪ್ರತಿಭಟನೆ, ಹೋರಾಟದ ವರ್ಷಗಳಲ್ಲಿ ಬೆಳೆದೆ. ಆಫ್ರಿಕಾ ಸ್ವಾತಂತ್ರ್ಯದ ಕನಸು ನನಸಾಗಿದ್ದನ್ನು ಕಂಡೆ. ಆಫ್ರಿಕಾ ಎನ್ನುವ ಭೂಮಿ ಕಾಡು ಜನರ ಶೂನ್ಯನಾಡು. ಆದ್ದರಿಂದ ಅದನ್ನು ಬೇಕಾದಂತೆ ಲೂಟಿ ಹೊಡೆಯಬಹುದು ಎಂದು ಮೆರೆದ ಐರೋಪ್ಯ ಅಹಂಕಾರ ಪ್ರಜ್ಞೆಗೆ ನಾನು ಮೊದಲು ಉತ್ತರಿಸಬೇಕು. ನಿಮ್ಮ ನೆಪ ಅತ್ಯಂತ ಕುಟಿಲ. ಆಫ್ರಿಕಾಕ್ಕೆ ಅದರದೇ ಇತಿಹಾಸವಿದೆ, ಧರ್ಮವಿದೆ, ನಾಗರಿಕತೆ ಇದೆ."

ಅಚೀಬೆಯ ಈ ಗಟ್ಟಿ ನಂಬಿಕೆಯನ್ನು ಅವರ ಕೃತಿಗಳು ಪ್ರತಿಫಲಿಸುತ್ತವೆ. ಅಚೀಬೆಯ ಕೃತಿಗಳು ಗತವೈಭವದ ಗುಣಗಾನವಲ್ಲ. ಪರಿವರ್ತನೆಯ ಪ್ರಕ್ರಿಯೆಯ ವಿಶ್ಲೇಷಣೆ. ರಾಮಮೂರ್ತಿ

# ಕೊಡಗಿನ ಕುರೂಪ ದರ್ಶನ

[ ಮೊದಲ ಪುಟದಿಂದ]

ಪರಂಪರೆಯಾಗಿ ದುಡಿಯುವ ಆದಿವಾಸಿಗಳ ಬೆವರಿನಿಂದಾಗಿ ಮತ್ತು ಇತರೆ ಕೂಲಿಗಳಿಂದಾಗಿ ಅಲ್ಲಿ ಹಣದ ಹೊಳೆ ಹರಿಯುತ್ತಿದೆ. ಕಾಡಿನ ಮಧ್ಯ ಸುಂದರವಾದ ಬಂಗಲೆಗಳು ಕಂಗೊಳಿಸುತ್ತವೆ. ಅವರ ವಾಹನಗಳು ಓಡುತ್ತವೆ, ಮದುವೆ ಮುಂತಾದ ಸಮಾರಂಭಗಳು, ಹುತ್ತರಿ ಕುಣಿತ-ಕುಡಿತಗಳು ವಿಜೃಂಭಣೆಯಿಂದ ಸಾಗುತ್ತವೆ. ಆದರೆ ಸದಾ ದುಡಿಯುತ್ತ-ಸವೆಯುತ್ತ ಹೋಗುತ್ತಿರುವ ಬಡವರ ಪಾಲಿಗೆ ಬರುವುದು ಅರೆಹೊಟ್ಟೆಗೆ ಸಾಲುವಷ್ಟು ಹಣ ಇಲ್ಲವೆ ಭತ್ತ (ಜೊತೆಗೆ-ಎದುರಾಡುವ ಸೂಚನೆ ಬಂದರೆ-ಒದೆತ). ಪ್ರತಿಭಟಿಸಿದರೆ ಕೂಲಿ ದೇಹಗಳು ಕಾಫಿ ಗಿಡಗಳಿಗೆ ಗೊಬ್ಬರವಾಗಿಬಿಡುತ್ತನೆ ಕಾಡಿನೊಡೆಯರಮಧ್ಯ ಕ್ರೂರಮೃಗಗಳೂ ಭೀತಿಯಿಂದ ಬದುಕುತ್ತಿವೆ.

ಕೊಡಗಿನಲ್ಲಿ ಹೆಣ್ಣು ಹೆಂಡಗಳಿಗೆ ಕೊರತೆಯಿಲ್ಲ. ಇವೆರಡೂ ಇವರ ಸಂಸ್ಕೃತಿಯ ಸೆಲೆಗಳಾಗಿವೆ. ಕೊಡಗರು ಮೃಗ ಬೇಟೆಯಲ್ಲಿ ನಿಪುಣರಾದಂತೆ ಹೆಣ್ಣುಗಳ ಬೇಟೆಯಲ್ಲೂ ನಿಪುಣರು. ಕೈ ಮೈ ತುಂಬಿಕೊಂಡ ಕೆಲಸದ ಹೆಣ್ಣುಗಳು ಇವರಿಗೆ ಕಾಮದ ವಸ್ತುಗಳೂ ಹೌದು. ಎರಡು ವರ್ಷಗಳ ಹಿಂದೆ ನನ್ನ ಸಂಬಂಧಿ ಲಲಿತ, ೧೬ ವರ್ಷದ ಮುಗ್ಧೆ, ತನ್ನೆಲ್ಲ ಆಸೆಗಳನ್ನು ಕನಸುಗಳನ್ನು ಕೊನೆಗೊಳಿಸಿ ಬಾವಿಗೆ ಹಾರಿ ಪ್ರಾಣ ಬಿಟ್ಟಳು. ಇದರ ಹಿನ್ನೆಲೆ ಆಕೆ ಬಲತ್ಕಾರದಿಂದಾಗಿ ಗರ್ಭಿಣಿಯಾದದ್ದು. ಗರ್ಭಪಾತ ಮಾಡಿಸಿಕೊಂಡರೂ ಊರ ಜನರ ವ್ಯಂಗಕ್ಕೆ ಕೊರಗಿ ಕರಗಿ ಬಾವಿಗೆ ಶರಣು ಹೋದಳು. ಇವಳ ತಂದೆ-ತಾಯಿಗಳು ಮೈನೆರೆದ ಮಗಳನ್ನು ಆಕೆ ಒಲ್ಲೆಂದು ಹಟ ಹಿಡಿದರೂ ಪಕ್ಕದ ಹಳ್ಳಿಯ ಶ್ರೀಮಂತನ ಮನೆಯಲ್ಲಿ ಅಡಿಗೆ ಕೆಲಸಕ್ಕೆ ಬಿಟ್ಟರು. ಅವರಿಗೆ ಮಗಳ ಬದುಕಿಗಿಂತ ಹಣವೇ ಅಗತ್ಯವೆನಿಸಿತ್ತು. ಪರಿಣಾಮ ಯಥಾ ಪ್ರಕಾರ. ನಂತರ ಆಕೆಯ ದೇಹದ ಬದಲಾವಣೆಯ ಗತಿಯನ್ನು ಗುರುತಿಸಿದ ಮನೆಯೊಡೆಯ ಆಕೆಯನ್ನು ಹಿಂತಿರುಗಿ ಕಳಿಸಿದ.

ಇಲ್ಲಿ ಕೂಲಿಯಾಳುಗಳು ಸ್ನಾನ ಮಾಡಿ, ಮಡಿಯಾದ ಬಟ್ಟೆ ತೊಟ್ಟು ಯಜಮಾನನ ಮನೆಗೆ ಬರುವುದು ಅಪರೂಪ. ಹಾಗೆ ಬಂದರೆ ಮನೆಯೊಡತಿಯ ಕಣ್ಣು ಕೆಂಪಾಗುತ್ತವೆ. ತನ್ನ ಗಂಡ ಇವರನ್ನು ಭೋಗಿಸಬಹುದೆಂಬುದೇ ಇದಕ್ಕೆ ಹಿನ್ನೆಲೆ. ಆದರೆ ಮುಂಜಾಗ್ರತೆಯ ಕ್ರಮಗಳು ಎಂಥ ಪರಿಣಾಮವನ್ನೂ ಬೀರುವುದಿಲ್ಲ. ಈ ರೀತಿ ಕಾಮತೃಷೆಗೆ ಬಲಿಯಾಗಿ ವರ್ಷವೂ ಅನೇಕ ಅಬಲೆಯರು ಜೀವಕಳೆದುಕೊಳ್ಳುತ್ತಲೇ ಇರುತ್ತಾರೆ. ಹಾಗೇ ಗರ್ಭಧರಿಸುತ್ತಲೇ ಇರುತ್ತಾರೆ. ಈ ಹಿನ್ನೆಲೆಯಲ್ಲಿ ಅನೇಕ ಸಲ ಕೊಲೆಗಳೂ ಆಗುತ್ತವೆ. ಕಾಡುಕೊಲೆಯ ಸುದ್ದಿಗಳು ನಾಗರಿಕ ಜನತೆಯ ಕಿವಿಗೆ ತಲುಪಲು ಸಾಧ್ಯವೇ ಇಲ್ಲ.

ಇಲ್ಲಿಯ ಜೀತಪದ್ಧತಿ ಒಂದಿಲ್ಲೊಂದು ರೀತಿಯಿಂದ ರೂಪತಾಳಿ ತನ್ನ ಅಸ್ತಿತ್ವವನ್ನು ಕಾಯ್ದುಕೊಂಡೇ ಇರುತ್ತದೆ. ಮಳೆಗಾಲದ ಸತತ ಮಳೆಗಾಳಿಯ ಹೊಡೆತಕ್ಕೆ ಸಿಕ್ಕು ಕೂಲಿಗಳು ಚಳಿಜ್ವರಕ್ಕೆ ತುತ್ತಾಗುತ್ತಾರೆ. ಕಾಡಿನಲ್ಲಿ ದೊರೆಯುವ ಒಂದು ರೀತಿಯ ಮೂಲಿಕೆಯ ಚಿಗುರಿನಿಂದ ಈ ಚಳಿ ಜ್ವರವನ್ನು ತಡೆಗಟ್ಟುವ ಸಾಧ್ಯತೆಯುಂಟು. ಇದೇ ನೆಪಮಾಡಿಕೊಂಡು ಅನೇಕ ಜನ ಕೊಡಗರು ತಮ್ಮ ಆಳುಗಳು ಚಳಿಜ್ವರದಿಂದ ಬಳಲುವಾಗ ಚಿಗುರಿನಿಂದ ಕಷಾಯಮಾಡಿ ಅದರಲ್ಲಿ ತಮ್ಮ ಮೂತ್ರ ಬೆರೆಸಿಕೊಡುತ್ತಾರೆ. ಹೀಗೆ ಮಾಡುವುದರಿಂದ ಜೀತದಾಳುಗಳು ನಮ್ರವಾಗಿ ಇರುತ್ತಾರೆ ಎಂಬ ನಂಬಿಕೆ ಅವರದು.

ನಾನು ಕೊಡಗಿನ ತಿತಿಮತಿಯಲ್ಲೇ ಬಾಲ್ಯವನ್ನು ಕಳೆದವಳು. ನನ್ನ ತಂದೆಯ ಹತ್ತಿರ ಇದ್ದದ್ದು ದುಡಿದು ತಿನ್ನುವ ಶಕ್ತಿಮಾತ್ರ. ಒಂದು ಸಲ ಶ್ರೀಮಂತ ಕೊಡಗನಲ್ಲಿ ಗುತ್ತಿಗೆ ಜಮೀನು ಮಾಡಲು ಒಪ್ಪಿಕೊಂಡರು. ವ್ಯವಸಾಯ ಕೆಲಸ ಆರಂಭವಾಗಿ ಇನ್ನೇನು ಸುಗ್ಗಿಬರುವ ಕಾಲದಲ್ಲಿ ನಮ್ಮಲ್ಲಿದ್ದ ಒಂದು ಹಸುವನ್ನು—ಭೂಮಾಲಿಕ ತೀರ ಕಡಿಮೆ ಬೆಲೆಗೆ ಕೇಳಿದ್ದರಿಂದ—ಕೊಡಲಿಲ್ಲವೆಂಬ ಕಾರಣಕ್ಕಾಗಿ ಹೊಡೆಯುವ-ಬಡಿಯುವ ಬೆದರಿಕೆಹಾಕಿ ಅಲ್ಲಿಂದ ಬಿಟ್ಟೋಡುವಂತೆ ಮಾಡಿದ. ಹೀಗೆ ಕೊಡಗರು ದುಡಿಸಿಕೊಳ್ಳುವಲ್ಲಿ ನಿಪುಣರು. ಕೊನೆಗೆ ನನ್ನ ತಂದೆ ತಿತಿಮತಿಯ ಕಾಡಿನಲ್ಲಿ ಜೀವ ತೇಯ್ದು ಭೂಮಿಮಾಡಿ ವ್ಯವಸಾಯ ಪ್ರಾರಂಭಿಸಿದರು. ಆದರೆ ಕಾಡುಪ್ರಾಣಿಗಳ ಕಾಟದಿಂದಾಗಿ ವರ್ಷಕ್ಕಾಗುವಷ್ಟು ಬೆಳೆದ ಬೆಳೆ ಎರಡು ತಿಂಗಳಿಗೂ ಸಾಕಾಗುವಷ್ಟು ಉಳಿಯುತ್ತಿರಲಿಲ್ಲ. ರಾತ್ರಿ ಘೋರಕತ್ತಲೆಯಲ್ಲಿ ನನ್ನ ತಾಯಿ ಅಷ್ಟಾದರೂ ಬೆಳೆ ಉಳಿಸಿಕೊಳ್ಳುವ ಹಂಬಲದಿಂದ ಡಬ್ಬಿಯನ್ನು ಬಾರಿಸುತ್ತ ಗದ್ದೆಯನ್ನು ಆನೆ, ಹಂದಿ ಮುಂತಾದ ಕಾಡು ಪ್ರಾಣಿಗಳಿಂದ ಸಾಧ್ಯವಾದಷ್ಟು ರಕ್ಷಿಸುತ್ತಿದ್ದಳು. ತಿತಿಮತಿಯ ಕಾಡಿನ ಮಧ್ಯ ನನಗೆ ಸಾವು-ಬದುಕಿನ ಮಧ್ಯದ ಗೆರೆಯನ್ನು ಗುರುತಿಸಲಾಗುತ್ತಿರಲಿಲ್ಲ.

ಬೆಳೆದ ಭತ್ತ ಮುಗಿದ ಮೇಲೆ ಮನೆಯ ಅಕ್ಕಪಕ್ಕದಲ್ಲಿ ಬೆಳೆದ ತರಕಾರಿ, ಮತ್ತು ಬಾಳೆಹಣ್ಣನ್ನು ಮೈಲುದ್ದ ದೂರದಲ್ಲಿರುವ ಶ್ರೀಮಂತರ ಮನೆಗಳಿಗೆ ಕುಕ್ಕೆತುಂಬ ಹೊತ್ತುಕೊಂಡು ಹೋಗಿ ಸೇರು ಅಕ್ಕಿಗೆ ಮಾರಿಬರುತ್ತಿದ್ದೆ. ಅದೇ ತರಕಾರಿ ಬೇಯಿಸಿ ತಿಂದರೆ ಅಕ್ಕಿಗಿಂತಲೂ ಶಕ್ತಿ ದೊರೆಯುತ್ತದೆಂಬುದು ಗೊತ್ತಿರಲಿಲ್ಲ. ಹೀಗೇ ಹಾಲು ತುಪ್ಪ, ಬೆಣ್ಣೆ, ತರಕಾರಿ ಬಾಳೆಹಣ್ಣು ಉತ್ಪಾದಿಸಿ ಅವರಿಗೆಲ್ಲಕೊಟ್ಟು ಮುಷ್ಟಿ ಅಕ್ಕಿ ತರಬೇಕಾಗಿತ್ತು. ವಾರಿಗೆಯವರು ಊಟಕ್ಕೆ ಕರೆದರೆ ಹರಿಜನ-ಗಿರಿಜನರಿಗೆ ನೀಡಲೆಂದು ಇಟ್ಟಿರುವ ಪಾತ್ರೆಗಳನ್ನೇ ನಮಗೂ ಬಳಸುತ್ತಿದ್ದರು. ನಮ್ಮ ಗುಡಿಸಲು ವಾಸ ಮತ್ತು ಹರಿದ ಬಟ್ಟೆಗಳೇ ಹೀಗೆ ಮಾಡಲು ಕಾರಣ. ಮುಂದೆ ತಿಳುವಳಿಕೆ ಬಂದ ನಂತರ ಇಂಥ ಪ್ರಸಂಗಗಳು ಬಂದಾಗ ನಾನು ತಿನ್ನುವುದನ್ನು ನಿರಾಕರಿಸಿದಾಗ ನಮ್ಮ ತಂದೆಯವರೆಗೂ ದೂರು ಬರುತ್ತಿತ್ತು. ನಮ್ಮ ತಂದೆ ಈ ನಿರಾಕರಣೆ ಕೃತಘ್ನತೆಯ ಲಕ್ಷಣವೆಂದು ತಿಳಿದದ್ದರಿಂದ ನನಗೆ ಹೊಡೆದು "ದೊಡ್ಡವರು ಕೊಟ್ಟದ್ದನ್ನು ತಿನ್ನಬೇಕು, ಕುಡಿಯಬೇಕು" ಎಂಬ ನೀತಿಪಾಠವನ್ನು ಹೇಳಿ ನನ್ನಲ್ಲಿಯ ಸ್ವಾಭಿಮಾನವನ್ನು ಕೊಲ್ಲಲು ಪ್ರಯತ್ನಿಸುತ್ತಿದ್ದರು. ಜೊತೆಗೆ ಶ್ರೀಮಂತರನ್ನು ಕಂಡಾಗ ಕೈಜೋಡಿಸಿ ನಮಸ್ಕರಿಸುವುದನ್ನೂ, ಅವರು ಮನೆಗೆ ಬಂದರೆ ಮರಳಿಹೋಗುವವರೆಗೂ ಎದ್ದು ನಿಲ್ಲುವುದನ್ನೂ ಕಲಿಸುತ್ತಿದ್ದರು.

ಮತ್ತೆ ನಾನು ದನಕಾಯುವ ಬಡಮಕ್ಕಳ ಜೀವನ ನೆನೆಸಿಕೊಂಡರೆ ಇದೆಲ್ಲ ಕಷ್ಟಮಯ ಎಂದು ಅನ್ನಿಸುವುದೇ ಇಲ್ಲ. ಕಾಡುಪ್ರಾಣಿಗಳಿಂದ, ಶ್ರೀಗಂಧದ ಕಟ್ಟಿಗೆಯ ಕಳ್ಳಸಾಗಾಣಿಕೆದಾರರ ಕೈಯಿಂದ ಉಳಿದು ಬಂದರೆ ಅವರದು ಪುನರ್ಜನ್ಮವೆಂದೇ ತಿಳಿಯಬೇಕು. ಈ ಮಕ್ಕಳು ಸುದ್ದಿಹಬ್ಬಿಸಬಹುದೆಂಬ ಅನಿಸಿಕೆಯಿಂದ ಕಳ್ಳಸಾಗಾಣೆದಾರರು ವೃತ್ತಿನಿರತರಾದಾಗ ಈ ಮಕ್ಕಳನ್ನು ಕಂಡರೆ ಕೊಲ್ಲದೆ ಬಿಡುವುದಿಲ್ಲ. ಇದು ಇಲ್ಲಿಯ ಕುರೂಪ ಬದುಕಿನ ಒಂದು ಇಣುಕುನೋಟ.

# ಕುರುಬರ ಕುಸಂಬಂಧ

[4ನೇ ಪುಟದಿಂದ]

ಹೊರಕ್ಕೆ ಹೋಗಲು ಕುರ್ಚಿಬಿಟ್ಟು ಮೇಲೆದ್ದೆ. ಮತ್ತದೇಅಯ್ನೋರು ನನ್ನಸಿಸ್ಥತಿಕಂಡು 'ತಮ್ಮಾ ಬೇಜಾರ್ ಆಗಬ್ಯಾಡ.... ತಿಂಡಿ ತಿಂದ್ ಹೋಗ್ ಬಾ....' ಅಯ್ನೋರ ಈ ಮಾತಿನ ಜತೆಗೆ 'ನೋಡಿದೇನು ಮಂಗಾ! ಅವರ್ದೇಟ್ ದೊಡ್ಡ ಬುದ್ಧಿ. ಹೋಗ್ಲಿ ಬಾ, ಬಾ, ಅಯ್ನೋರ್ ಮನೆಯಾಗ್ ತಿಂದೋರಿಲ್ಲಂತೆ! ಕೈಲಾಸ ಕಂಡೋರಿಲ್ಲಂತೆ! ಈ ಪುಣ್ಯ ಎಲ್ಲರ್ಗೂ ಸಿಗಲ್ಲ ಬಾ ಬಾರೋ ' ಅಂದ ಮೊದಲು ವಾದಿಸಿದ್ದ ನನ್ನಜಾತಿ ಹಿರಿಯ. 'ಹುಂಡ್!' ಎಂದು ತಿರಸ್ಕಾರದಿಂದ 'ಆ ನಿನ್ನ ಅಯ್ನೋರ ಪ್ರಸಾದನ ನಾಯಿಗೆ ಹಾಕು ಅನ್ನು!' ಹೀಗೆ ಮತ್ತೆ ಕಟಕಿಯಾಡಿ ಹೊರಬಂದೆ. ಹಿಂದಿನಿಂದ ಅಯ್ನೋರು 'ಏಯ್ ನೋಡ್ಲೇ ಕುರುಬ...! ನೀ ಒಲ್ಲದಿದ್ರೆ ತಿಕ ಮುಚ್ಕಿಗ್ಯಂದು ತೆಪ್ಪಗೆಹೋಗು ಹೈವಾನ್ ಮುಂಡೆ ಗಂಡನ್ ತಂದು!' ಎಂಬ ವೇದ ವಾಕ್ಯವನ್ನು ಪೇಳುತ್ತಿದ್ದದ್ದು ಕೇಳಿಸಿತು. ಅಲ್ಲಿನಿಲ್ಲದೆ ಮನೆಗೆ ಬಂದೆ. ಇಷ್ಟೆಲ್ಲಾ ನಡೆಯಲು ನಾನೂ ಕುರುಬನಾಗಿ ಹುಟ್ಟಿದ್ದೇ ಕಾರಣವೇ?

# ಹಳ್ಳಿಗರ ಜತೆ ಸಾಕ್ರೆಟೀಸ್ : ಸ್ತ್ರೀಯರ ಬಗ್ಗೆ ಮಾತುಕತೆ

[ಒಂದು ಮುಂಜಾನೆ ಚಾವಡಿ ಕಟ್ಟೆಯ ಮೇಲೆ ಹಳ್ಳಿಗರು ಅದು-ಇದು ಮಾತನಾಡುತ್ತ ಕುಳಿತಿರುವ ಸಮಯದಲ್ಲಿ ಸಾಕ್ರೇಟಿಸ್ ಅಲ್ಲಿಗೆ ಹೋದ. ಹಳ್ಳಿಗರು ಅವನನ್ನು ಬರಮಾಡಿಕೊಂಡರು. ಭಾರತೀಯ ಸಂಸ್ಕೃತಿಯ ಹಿರಿಮೆಯ ಬಗ್ಗೆ ಹೇಳಿ, ಅದಕ್ಕೆ ವಿಶ್ವದಲ್ಲಿ ಸಿಗಬೇಕಾದ ಬೆಲೆ ಸಿಕ್ಕಿಲ್ಲವೆಂದು ಗೊಣಗಿದ ರಾಜಕಾರಣಿಯೊಬ್ಬನನ್ನು—ಭಾರತೀಯ ಸ್ತ್ರೀಯರ ಹೀನ ಬದುಕಿನ ಹಿನ್ನೆಲೆಯಲ್ಲಿ—ತರಾಟೆಗೆ ತೆಗೆದುಕೊಂಡು ಬಂದಂಥ ಸಾಕ್ರೇಟಸ್ ಅದೆ ವಿಷಯದ ಬಗ್ಗೆ ಹಳ್ಳಿಗರಿಗೆ ಪ್ರಶ್ನಿಸತೊಡಗಿದ]

[ಪಂಜಾಬದ ಗುರ್ಗಾನ ಜಿಲ್ಲೆಯ ಜಿಲ್ಲಾಧಿಕಾರಿಯಾಗಿದ್ದಂಥ ಎಫ್.ಎಲ್. ಬ್ರೈನೆ 1929ರಲ್ಲಿ ಬರೆದ "ಸಾಕ್ರೆಟೀಸ್ ಇನ್ ಆ್ಯನ್ ಇಂಡಿಯನ್ ವಿಲೇಜ್" ಎಂಬ ಪುಸ್ತಕದ 'ಆನರ್ ಯುವರ ವುಮೆನ್' ವಿಷಯದ ಅನುವಾದವಿದು: ಇಲ್ಲಿ ಲೇಖಕರು ಸಾಕ್ರೆಟೀಸ್ ಎಂಬ ಹೆಸರಿನಿಂದ ಹಳ್ಳಿಗರಿಗೆ ಪ್ರಶ್ನಿಸುತ್ತ ಮಾರ್ಗದರ್ಶನ ಮಾಡಿದ್ದಾರೆ. —ಅನು : ದರ್ಗಾ]

ಸಾಕ್ರೆಟೀಸ್ : ಯಾರಾದರೂ ಗೋಹತ್ಯೆ ಮಾಡಿದರೆ ದಂಗೆಯಾಗುವುದಲ್ಲವೆ?

ಹಳ್ಳಿಗರು : ಹೌದು, ಸಹಜವಾಗಿ.

ಸಾಕ್ರೆಟೀಸ್ : ತನ್ನ ಹೆಂಡತಿ ಆತ್ಮಹತ್ಯೆ ಮಾಡಿಕೊಳ್ಳುವ ಹಾಗೆ, ಸಾಯುವ ಹಾಗೆ, ಅಥವಾ ಓಡಿ ಹೋಗುವಹಾಗೆ ಯಾವನಾದರೂ ಮಾಡಿದರೆ ದಂಗೆಯಾಗುವುದೆ?

ಹಳ್ಳಿಗರು : ಸಾಧ್ಯವಿಲ್ಲ, ನಾವು ಅವನ ಬಗ್ಗೆ ಕರುಣೆ ತೋರುತ್ತೇವೆ. ಅಲ್ಲದೆ ಆತ ಇನ್ನೊಂದು ಲಗ್ನವಾಗುವ ಸಮಯದಲ್ಲಿ ಭಾಗವಹಿಸುತ್ತೇವೆ.

ಸಾ : ನಿಮ್ಮ ಹಸು ಕರು ಹಾಕುವಾಗ ನೀವು ಯಾರನ್ನು ಕರೆಯುವಿರಿ?

ಹ : ಆ ವಿಷಯವಾಗಿ ಗೊತ್ತಿರುವ ರೈತನನ್ನು.

ಸಾ : ನಿಮ್ಮ ಹೆಂಡತಿಯ ಹೆರಿಗೆಯ ಸಮಯದಲ್ಲಿ ಯಾರನ್ನು ಕರೆಯುವಿರಿ?

ಹ : ಕಸಗೂಡಿಸುವವನ ಇಲ್ಲವೆ ಮಾದಿಗನ ಹೆಂಡತಿಯನ್ನು.

ಸಾ : ಅವಳು ಹಳ್ಳಿಯ ತೀರ ಗಲೀಜು ಹಾಗೂ ಕೀಳು ಹೆಂಗಸು ಅಲ್ಲವ?

ಹ: ಹೌದು.

ಸಾ : ಅಲ್ಲದೆ ನೀವು ಬಾಣಂತಿಯನ್ನು ಚಿಂದಿಬಟ್ಟೆ ಹೊದಿಸಿ ಕತ್ತಲೆ ಕೋಣೆಯಲ್ಲಿ ಇಡುವಿರಲ್ಲವೆ?

ಹ : ನಿಜ.

ಸಾ : ಅಲ್ಲದೆ ಪರದಾ ಮುಂತಾದುವುಗಳ ಬಗ್ಗೆ ಜಂಬ ಕೊಚ್ಚಿಕೊಳ್ಳುವಿರಿ. ಆದರೆ ನಿಮ್ಮ ಹೆಂಗಸರಿಗೆ ಕಕ್ಕಸಿನ ವ್ಯವಸ್ಥೆ ಮಾಡದೆ ಅವರು ಅಸೌಖ್ಯದ ಪ್ರಾಣ ಸಂಕಟದಿಂದ ಒಳಲುವ ಸ್ಥಿತಿಯಲ್ಲಿಟ್ಟಿರುವಿರಿ. ಅವರು ಮಲವಿಸರ್ಜನೆಗಾಗಿ ಹಳ್ಳಿಯ ಹೊರಗಡೆ ಅಲೆದಾಡುತ್ತ ಹೋಗುವುದಕ್ಕಾಗಿ ರಾತ್ರಿಯವರೆಗೂ ಕಾಯಬೇಕಾಗುತ್ತದೆ. ಅಥವಾ ಹಗಲು ಹೊತ್ತಿನಲ್ಲಿ ನಾಚಿಕೆಯಿಂದ ಅಡಗಿ ಕೂಡುವ ಸ್ಥಳವನ್ನು ಹುಡುಕಬೇಕಾಗುತ್ತದೆ. ಹಗಲು ಮತ್ತು ರಾತ್ರಿ–ಹೀಗೆ ಎಲ್ಲ ಸಮಯದಲ್ಲೂ–ತೊಂದರೆಗೀಡಾಗುತ್ತಾರೆ. ಅಲ್ಲದೆ ಭಯೋತ್ಪಾದಕ ನಾಯಿಗಳಿಂದಾಗಿ ಅವರು ಸ್ಥಳವನ್ನು ಬದಲಾಯಿಸಬೇಕಾಗುತ್ತದೆ.

ಹ: ನೀವು ಹೇಳುವುದು ನಿಜ ಸಾಕ್ರೆಟೀಸ್. ನೀವು ನಮ್ಮ ಕೆಟ್ಟಪದ್ಧತಿಯನ್ನು ಬಯಲಿಗೆಳೆದು ತೋರಿಸಿಕೊಟ್ಟೀರಿ.

ಸಾ : ಅಲ್ಲದೆ ನೀವು ನಮ್ಮ ಹುಡುಗಿಯರನ್ನು ಸರಿಯಾಗಿ ಬೆಳೆಸುವ ಮತ್ತು ಶಿಕ್ಷಣ ಕೊಡುವ ಬಗ್ಗೆ ಯಾವುದೇ ಪ್ರಯತ್ನ ಮಾಡುವುದಿಲ್ಲ.

ಹ : ಆ ಕಡೆ ಗಮನ ಹರಿಸಿಲ್ಲ.

ಸಾ : ಹೆಣ್ಣು ಹುಟ್ಟಿದರೆ ಆ ಕೂಸಿನ ತಂದೆಯನ್ನು ಸಂತೈಸುವಿರಲ್ಲವೆ?

ಹ : ಹೌದು.

ಸಾ : ವಾಸ್ತವವಾಗಿ ಶೈಶವ ಮತ್ತು ಬಾಲ್ಯಾವಸ್ಥೆಯಲ್ಲಿ ಹೆಣ್ಣು ಮಕ್ಕಳ ಜೀವನ ಕಷ್ಟಮಯವಾಗಿದ್ದರಿಂದ ಹುಡುಗರಿಗಿಂತ ಹುಡುಗಿಯರು ಹೆಚ್ಚಾಗಿ ಅಕಾಲಮರಣಕ್ಕೀಡಾಗುತ್ತಾರೆ. ಇಷ್ಟಾದರೂ ವೈದ್ಯರು 'ಹುಡುಗರಿಗಿಂತ ಹುಡುಗಿಯರನ್ನು ಬದುಕಿಸಿಕೊಳ್ಳುವುದು ಸರಳವೆಂದು ಹೇಳುತಾರೆ.

ಹ: ನಿಜ, ನಮ್ಮದು ತಪ್ಪು. ನಾವು ನಮ್ಮ ಹೆಣ್ಣುಮಕ್ಕಳನ್ನು ಉಪೇಕ್ಷೆ ಮಾಡುತ್ತೇವೆ.

ಸಾ: ಮತ್ತು ಅವರಿಗೆ ಮನೆಗೆಲಸದ, ಮಕ್ಕಳನ್ನು ಸಾಕುವ, ಮತ್ತು ಗಂಡಂದಿರನ್ನು ನೋಡಿಕೊಳ್ಳುವ ಜ್ಞಾನವಿಲ್ಲದಷ್ಟು ಚಿಕ್ಕವಯಸ್ಸಿನಲ್ಲೇ ನೀವು ಅವರನ್ನು ಮದುವೆಮಾಡಿಕೊಳ್ಳುವಿರಿ. ಅವರು ಶಾಲೆಯಲ್ಲಿ ಆಟ-ಪಾಠಗಳ ಮುಖಾಂತರ ಮನಸ್ಸು ಮತ್ತು ಶರೀರವನ್ನು ಬೆಳೆಸಿಕೊಳ್ಳುವ ಅವಧಿಯಲ್ಲೇ ತಾಯಂದಿರಾಗುತ್ತಾರೆ.

ಹ : ನಿಜ ಸಾಕ್ರೆಟೀಸ್. ನಮ್ಮಲ್ಲಿ ಬಹಳಷ್ಟು ಜನರಿಗೆ ಇದೆಲ್ಲ ಅನ್ವಯಿಸುತ್ತದೆ ಮತ್ತು ಒಂದಲ್ಲೊಂದು ರೀತಿಯಲ್ಲಿ ಇದು ನಮ್ಮೆಲ್ಲರಿಗೂ ಅನ್ವಯಿಸುತದೆ.

ಸಾ : ಅಲ್ಲದೆ ನಿಮ್ಮಲ್ಲಿ ಅನೇಕರು ಸ್ತ್ರೀಯರನ್ನು ಜೀವನವಿಡೀ ಗೃಹಬಂಧನದಲ್ಲಿಡುವಿರಿ.

ಹ : ಹೌದು ಕೆಲವರಲ್ಲಿ ಪರದಾ ವ್ಯವಸ್ಥೆ ಇದೆ.

ಸಾ : ಪರದಾ ವ್ಯವಸ್ಥೆ ಇಟ್ಟುಕೊಳ್ಳದ ಅನೇಕರು ತಮ್ಮ ಹೆಂಗಸರು ಒಂದಿಷ್ಟು ಹಣ ಇಲ್ಲವೆ ಶಿಕ್ಷಣಪಡೆದ ಕೂಡಲೇ ಗೃಹಬಂಧನದಲ್ಲಿಡುವರು.

ಹ : ಹೌದು ಅದು ಪದ್ಧತಿ ಕೂಡ.

ಸಾ : ಮತ್ತು ಹೆಂಗಸರು ಎಲ್ಲ ಕೆಲಸಮಾಡುತ್ತ ಮಕ್ಕಳ ಪಾಲನೆ-ಪೋಷಣೆ ಮಾಡುವರು. ಆದರೆ ಗಂಡಸರು ಸುಮ್ಮನೆ ಸುತ್ತುಗಟ್ಟಿ ಕುಳಿತು ಧೂಮಪಾನ ಮಾಡುವರು.

ಹ : ಹೌದು, ಅದು ಕೂಡ ನಿಜ.

ಸಾ : ನಿಮ್ಮ ಹೆಂಡತಿ ಬರೀ ಹೆಣ್ಣು ಹಡೆದರೆ ನೀವು ಅವಳನ್ನು ದೂರುವಿರಿ, ಅವಳ ಬಗ್ಗೆ ನಿಷ್ಕರುಣಿಗಳಾಗುವಿರಿ, ಅಲ್ಲದೆ ಕೊನೆಗೆ ಇನ್ನೊಂದು ಮದುವೆ ಮಾಡಿಕೊಳ್ಳುವಿರಿ.

ಹ : ಅನೇಕ ಸಲ ಹೀಗೂ ಆಗುವುದು ನಿಜ.

ಸಾ : ಕಾಯಿಲೆಬಿದ್ದ ಮತ್ತು ನರಳುವ ಮಕ್ಕಳನ್ನು ಆರೈಕೆ ಮಾಡುವುದು ಮತ್ತು ಅವುಗಳ ಸಾವನ್ನು ನೋಡುವುದು ಹೆಂಗಸರ ಕೆಲಸವಾಗಿದೆ.

ಹ : ನಿಜ ಸಾಕ್ರೆಟೀಸ್ ನಾವು ತಪ್ಪು ಮಾಡುತಿದ್ದೇವೆ.

ಸಾ : ನೀವು ನಿಮ್ಮ ಹೆಣ್ಣುಮಕ್ಕಳಿಗೆ ಶಿಕ್ಷಣ ಕೊಡಿಸಿದರೆ ಮತ್ತು ಅವರು ಶಿಕ್ಷಣ ಪಡೆದು ಪೂರ್ಣ ಬೆಳೆಯುವವರೆಗೆ ಲಗ್ನಮಾಡದಿದ್ದರೆ ಅವರಿಗೆ ಮಕ್ಕಳನ್ನು ಬೆಳೆಸುವುದರ ಜ್ಞಾನ ಪಡೆಯಲು ಸಾಧ್ಯವಿದೆ. ಮತ್ತು ಜೀವತೆಗೆದುಕೊಳ್ಳುವಂಥ ಅನೇಕ ರೋಗ-ರುಜಿನುಗಳಿಂದ ಮಕ್ಕಳನ್ನು ರಕ್ಷಿಸುವ ಸಾಮರ್ಥ್ಯ ಪಡೆಯುವರು.

ಹ : ನೀವು ಹೇಳುವುದೆಲ್ಲ ಸರಿ.

ಸಾ : ಚುಚ್ಚುಮದ್ದಿನ ಬೆಲೆಗೊತ್ತಿರುವ ತಾಯಿ; ಚುಚ್ಚುಮದ್ದು ಹಾಕುವವ ಬಂದಾಗ ಕೂಸನ್ನು ಬಚ್ಚಿಡುವಳೆ?

ಹ : ಎಂದಿಗೂ ಇಲ್ಲ. ತಾಯಿ ತನ್ನ ಮಗುವನ್ನು ಅದರ ತಂದೆಗಿಂತ ಹೆಚ್ಚಿಗೆ ಪ್ರೀತಿಸುವಳು. ಚುಚ್ಚುಮದ್ದಿನ ಬೆಲೆ ಗೊತ್ತಾದರೆ ಮೈಲಿಬೇನೆ ಬರದಂತೆ ಖಂಡಿತ ನೋಡಿಕೊಳ್ಳುವಳು.

ಸಾ : ನೀವು ನಿಮ್ಮ ಹೆಂಗಸರನ್ನು ಗೌರವಿಸುವುದಿಲ್ಲ ಮತ್ತು ಅವರನ್ನು ನಿಮ್ಮ ದನಗಳಿಗಿಂತಲೂ ಕಡಿಮೆಯಾಗಿ ನೋಡಿಕೊಳ್ಳುವಿರಿ ಎಂದು ನಾನು ಹೇಳಿದರೆ ಸತ್ಯಕ್ಕೆ ದೂರವಾಗುವುದಿಲ್ಲವಲ್ಲವೆ?

ಹ : ಸಾಕ್ರೆಟೀಸ್ ನಮಗೆ ದಿಗಿಲಾಗುತ್ತಿದೆ. ನೀವು ಹೇಳುವುದು ತುಂಬ ಸರಿಯಾಗಿದೆ.

ಸಾ : ನನ್ನ ಮಾತುಗಳನ್ನು ನೆನಪಿಟ್ಟುಕೊಳ್ಳಿ: ಹೊಡೆಯಲಿಕ್ಕೆ, ಪೀಡಿಸಲಿಕ್ಕೆ, ಗುಲಾಮರಂತೆ ನಡೆಸಿಕೊಳ್ಳಲಿಕ್ಕೆ ದೇವರು ಕೊಟ್ಟ ಶ್ರಮಜೀವಿಗಳೆಂದು ತಿಳಿದುಕೊಳ್ಳದೆ ನೀವು ನಿಮ್ಮ ಸ್ತ್ರೀಯಂದಿರನ್ನು ಪುರುಷರಿಗೆ ಸಮವಾಗಿ ಕಂಡಾಗ, ಗೌರವಪೂರ್ಣವಾಗಿ ಕಂಡಾಗ, ಸರಿಯಾಗಿ ಅವರ ಬೆಳವಣಿಗೆಯಾಗುವಂತೆ ನೋಡಿಕೊಂಡು ನಿಮ್ಮ ಬದುಕಿನ ಸಮಭಾಗವೆಂದು ತಿಳಿದುಕೊಂಡಾಗ ಉಜ್ವಲ ಮತ್ತು ಆರೋಗ್ಯಮಯವಾದ ಬದುಕನ್ನು ಹೊಂದುವಿರಿ ಮತ್ತು ಇಡೀ ಜಗತ್ತೇ ನಿಮ್ಮನ್ನು ಗೌರವಿಸುವುದು. ●

## ಹೊರ ರಾಜ್ಯಗಳಲ್ಲಿ

# ಭಾಗಲ್ಪುರ ಜೈಲಿನಲ್ಲಿ ಇಂಕಲಾಬ್

ಉತ್ತರಪ್ರದೇಶದ ಭಾಗಲ್ಪುರದ ಜೈಲಿನಲ್ಲಿ ಹತ್ತಾರು ವಿಚಾರಣಾಧೀನ ಕೈದಿಗಳನ್ನೂ ಸೇರಿ ದಂತೆ ಹಲವಾರು ಜನ ಕೈದಿಗಳ ಕಣ್ಣುಗಳನ್ನು ನಿರ್ದಯವಾಗಿ ಕಿತ್ತುಹಾಕುವ ಕಾರ್ಯ ನಡೆ ದುದು ಜನರ ನೆನಪಿನಿಂದ ಇನ್ನೂ ಮಾಸಿರದಿರು ವಾಗಲೇ ಇದೇ ಜೈಲಿನಲ್ಲಿ ಜನಪರ ಹೋರಾಟಗ ಳನ್ನುನಡೆಸಿ ಖ್ಯಾತರಾದ ಶ್ರೀರಾಜ್‌ಇಂಕಲಾಬ್ ಸತ್ಯ-ನ್ಯಾಯಕ್ಕಾಗಿ ಉಪವಾಸ ಸತ್ಯಾಗ್ರಹ ನಡೆಸುತ್ತಿರುವ ವಿಷಯ ಜನರ ಮುಂದೆ ಬಂದಿದೆ.

ಜಯಪ್ರಕಾಶನಾರಾಯಣರ ಮಾರ್ಗದರ್ಶನ ದಲ್ಲಿ ನಡೆಯುತ್ತಿದ್ದ ಬಿಹಾರ ಆಂದೋಲನದಲ್ಲಿ ಚಿರಪರಿಚಿತರಾಗಿಹೋದ ೩೦ವರ್ಷದ ಶ್ರೀರಾಜ್ ಇಂಕಲಾಬ್ ಶೋಷಿತ ಜನತೆಗೆ ನ್ಯಾಯ-ಸಮಾ ನತೆಗಳನ್ನು ದೊರಕಿಸಿಕೊಡಲು ಜೀವಮಾನವಿಡೀ ದುಡಿಯಲು ನಿರ್ಧಾರ ಮಾಡಿದರು. ಅಧಿಕಾರ ಪಡೆಸುಲು ನಡೆಸುವ ಯಾವುದೇ ವಿಧದ ಹೊಂದಾ

**ಏಕಲವ್ಯ**

ಣಿಕೆಯೆಂದರೆ ರಾಜ್‌ಇಂಕಲಾಬರ ಉಗ್ರ ವಿರೋ ಧವಿತ್ತು. ಈ ಕಾರಣದಿಂದಲೇ ತುರ್ತುಪರಿಸ್ಥಿತಿ ಯಲ್ಲಿಯ ಹಲವಾರು ಕಹಿ ಅನುಭವಗಳ ನಂತ ರವೂ ಅವರು ಯಾವುದೇ ಕುರ್ಚಿಯ ಅಪೇಕ್ಷೆ ಯನ್ನು ಮಾಡದೇ ಹಳ್ಳಿಗಳಿಗೆ ಹೋಗಿ ಜನತೆ ಯ ಮಧ್ಯೆ ಕೆಲಸಮಾಡುವುದನ್ನೇ ಇಷ್ಟಪಟ್ಟರು.

ಭಾಗಲ್ಪುರ ಜಿಲ್ಲೆಯ ಅತ್ಯಂತ ಹಿಂದುಳಿದ ಪ್ರದೇಶವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡ ಶ್ರೀರಾಜ್ ಇಂಕಲಾಬ್ ರಜೌನಿ ಕ್ಷೇತ್ರವನ್ನು ವಿಶೇಷವಾಗಿ ನವಾದಾ ಗ್ರಾಮ ವನ್ನು ಆರಿಸಿಕೊಂಡರು. ಗ್ರಾಮದ ಬಹುಸಂಖ್ಯಾ ತರಾದ ಹರಿಜನ-ಗಿರಿಜನ-ಆದಿವಾಸಿ ಭೂರಹಿತ ರನ್ನು ಮತ್ತು ಹಿಂದುಳಿದ ಜಾತಿಗಳ ಭೂರಹಿತ ರನ್ನು ಒಂದುಗೂಡಿಸಿ ಭೂಮಿಗಾಗಿ "ನವ ಸಮಾಜವಾದಿ ಭೂಮಿಸೇನಾ" ಎಂಬ ಸಂಘಟನೆ ಯನ್ನು ಅವರು ಪ್ರಾರಂಭಿಸಿ ಗ್ರಾಮದ ಸರ್ವಾಂ ಗೀಣ ವಿಕಾಸವನ್ನು ಮಾಡುವಂಥ ಯೋಜನೆ ಯನ್ನು ರೂಪಿಸಿ ಕರ್ತವ್ಯದಲ್ಲಿ ತೊಡಗಿದರು. ಶ್ರೀರಾಜ್‌ಇಂಕಲಾಬರು ಈ ಭಾಗದಲ್ಲಿ ಸುಮಾರು ಮೂರುಸಾವಿರ ಜನ ಭೂರಹಿತರನ್ನು ಒಂದು ಸಂಘಟನೆಯುಡಿಯಲ್ಲಿ ಸಂಘಟಿಸಿದರು. ನೀರಾ ವರಿಯ ಸಾಧ್ಯತೆಗಳನ್ನು ಶೋಧಿಸಿ ನೀರಾವರಿಯ ಅನುಕೂಲತೆಗಳು ಈ ಭಾಗದ ಭೂಮಿಗೆ ಒದಗಿಸಬೇಕೆಂದೂ, ಸರ್ಕಾರದ ವಶದಲ್ಲಿರುವ ಭೂಮಿಯನ್ನು ಕೂಡಲೇ ಹಂಚಬೇಕೆಂದೂ ಒತ್ತಾಯಿಸಲಾಯಿತು. ಚಳವಳಿಯ ಕೊನೆಯ ಹಂತದಲ್ಲಿ ಶ್ರೀ ರಾಜ್ ಇಂಕಲಾಬ್ ಉಪವಾಸ ಸತ್ಯಾಗ್ರಹವನ್ನು ನಡೆಸಿದರಲ್ಲದೇ 'ಆತ್ಮಾಹುತಿ' ಯನ್ನು ನೀಡುವ ಬೆದರಿಕೆಯನ್ನೂ ಸಹ ನೀಡಿ ದರು. ಮಕ್ಕಳಿಗೆ ಸರಿಯಾದ ರೀತಿಯ ಶಿಕ್ಷಣ ನೀಡಿಕೆ, ಶಾಲಾಕಟ್ಟಡಗಳ ನಿರ್ಮಾಣ, ಮದ್ಯ ಪಾನದ ವಿರುದ್ಧ ಪ್ರಚಾರ, ಈ ಪ್ರದೇಶದ ಅಧಿ ಕಾರಿಗಳ ಭ್ರಷ್ಟಾಚಾರ ಬಯಲಿಗೆಳೆಯುವುದೇ ಮೊದಲಾದ ಕಾರ್ಯಗಳನ್ನೂ ಸಹ ಹಮ್ಮಿಕೊಂಡ 'ಭೂಮಿಸೇನೆ' ಇಡೀ ಭಾಗಲಪುರ ಜಿಲ್ಲೆಯ ಮನವನ್ನು ಸೆಳೆಯಿತು. ಸರ್ಕಾರದ ವಿರುದ್ಧ ಜನತೆ ಯನ್ನು ದಂಗೆಯೆಬ್ಬಿಸುತ್ತಾರೆಂದು 12.10.77 ರಂದು ಶ್ರೀರಾಜ್‌ರನ್ನು ಬಂಧಿಸಲು ಹೊರಟಾಗ ಅವರು ಸಿಕ್ಕಿಬೀಳಲಿಲ್ಲವಾದರೂ ಆ ಪ್ರದೇಶದ ಕೆಲವೇ ಜಮೀನ್ದಾರರ ಸಂಚಿನಿಂದ ಸಿಕ್ಕಿಬಿದ್ದರು.

ಸರ್ಕಾರದ ದೃಷ್ಟಿಯಲ್ಲಿ ಶ್ರೀರಾಜ್‌ಇಂಕಲಾಬ್ ಮಾಡಿರುವ ಅಪರಾಧವೆಂದರೆ:- ಜನತೆಗೆ ಅನ್ಯಾ ಯ ಸಹಿಸದಿರಲು ಕರೆನೀಡಿ ಅವರನ್ನು ಸಕ್ರಿಯ ಗೊಳಿಸುವುದು; ಅಧಿಕಾರಿಗಳ ಭ್ರಷ್ಟಾಚಾರವನ್ನು ಬಯಲಿಗೆಳೆಯುವುದು; ಭೂರಹಿತರಿಗೆ ಭೂಮಿಯ ನ್ನು ಹಂಚಲು ಒತ್ತಾಯಿಸುವುದು ಮೊದಲಾದವು ಗಳು. ರಾಜ್‌ರ ವಿರುದ್ಧ ಸರ್ಕಾರವು ವಿವಿಧ ಕಲಮು ಗಳ ಪ್ರಕಾರ ಆರು ಮೊಕದ್ದಮೆಗಳನ್ನು ಹೂಡಿರು ವುದಾದರೂ,ಅವರನ್ನು ಬಂಧಿಸಿ ನಾಲ್ಕುವರ್ಷಗಳು ಪೂರ್ಣಗೊಳ್ಳುತ್ತಿದ್ದರೂ ಒಂದು ಮೊಕದ್ದಮೆಯ ಬಗೆಗಾದರೂ ವಿಚಾರಣೆಯನ್ನು ನಡೆಸಿಲ್ಲ. ●

# ಚಿತ್ರದುರ್ಗದಲ್ಲಿ ಪೋಲೀಸ್ ಬೂಟು ಲಾಠಿಗಳ ಅಟ್ಟಹಾಸ

ನಾನು, ಚಿತ್ರದುರ್ಗ ಪೌರಸಭೆಯ ಪೌರ ಕಾರ್ಮಿಕ. ದಿನಾಂಕ ೩೦-೧೨-೮೧ರ ಬೆಳಿಗ್ಗೆ ೧೦-೩೦ಕ್ಕೆಸೆಮಿಉಲ್ಲಾ ಎಂಬ ಪೋಲೀಸು ಪೇದೆ ನಮ್ಮ ಮನೆಗೆ ಬಂದು ನನ್ನ ಚಿಕ್ಕಪ್ಪನ ಮಗ ತಿಪ್ಪೇಸ್ವಾಮಿಯನ್ನು ವಿಚಾರಿಸಿದ. ತಿಪ್ಪೇಸ್ವಾಮಿ ಆಗ ಮನೆಯಲ್ಲಿರಲಿಲ್ಲ?

ಕಳೆದ ರಂಜಾನ್ ಹಬ್ಬದ ಸಮಯದಲ್ಲಿ ತಿಪ್ಪೇ ಸ್ವಾಮಿಯು ಸೆಮಿಉಲ್ಲಾರ ಸಂಬಂಧಿಕರೊಡನೆ ಜಗಳವಾಡಿದ್ದ ದ್ವೇಷ ಹಸಿರಾಗಿತ್ತು. ಇದನ್ನು ಮನಗಂಡ ನಾನು ಸೆಮಿಉಲ್ಲಾರು ಬಂದಿದ್ದ ವಿಷಯ ದಲಿತ ಯುವಕರಿಗೆ ತಿಳಿಸಿದೆ. ಕಾರಣ ತಿಪ್ಪೇಸ್ವಾಮಿ ಹಿಂದೆ ಕಳ್ಳನಾಗಿದ್ದವನು ದಲಿತ ಯುವಕರ ಮಿತ್ರತ್ವದಿಂದ ಈಗ ಕಷ್ಟಪಟ್ಟು ದುಡಿದು ಬದುಕುವುದನ್ನು ಕಲಿತಿದ್ದ. ಈ ವಿಷಯ ನಾವು ಚರ್ಚಿಸುತ್ತಿರುವಾಗ, ತಿಪ್ಪೇಸ್ವಾಮಿ ಯನ್ನು ಬಂಧಿಸಿ ಪೋಲೀಸು ಠಾಣೆಗೆ ಕರೆದು ಕೊಂಡು ಹೋದ ವಿಷಯ ತಿಳಿಯಿತು. ಆಗ ನಾನು ದಲಿತ ಯುವಕರೊಡನೆ ಬಂಧಿಸಿದ ಕಾರಣ ಅರಿಯಲು ಪೋಲೀಸ್ ಠಾಣೆಗೆ ಹೋದೆ.

ಪೋಲೀಸ್ ಠಾಣೆಯಲ್ಲಿ ಸೆಮಿಉಲ್ಲಾರು, ನಗರ ಪೋಲೀಸ್ ಉಪ ನಿರೀಕ್ಷಣಾಧಿಕಾರಿಗಳ ಮುಂದೆ ತಿಪ್ಪೇಸ್ವಾಮಿಯನ್ನು ಬಂಧಿಸದ ಕಾರಣ ತಪ್ಪಾಗಿ ಹೇಳಿದರು. ತಿಪ್ಪೇಸ್ವಾಮಿಗೆ ಈಗ ಕಷ್ಟಪಟ್ಟು ದುಡಿದು ತಿನ್ನುವ ಹನ್ಯಾಸ ಇರುವುದರಿಂದ, ಸೆಮಿಉಲ್ಲಾರು ಹೇಳಿದಂತೆ ಕಳ್ಳತನ ಮಾಡಿಲ್ಲ ಎಂದು ಹೇಳಲು ನಾನು ಪ್ರಾರಂಭಿಸಿದೆ. ತಕ್ಷಣ ನಿರೀಕ್ಷಣಾಧಿಕಾರಿಗಳು -"ನನ್ನ ಮುಂದೆ ಮಾತನಾಡುವಷ್ಟು ಧೈರ್ಯ ವೇ, ನನ್ನ ಮಗನೇ"ಎಂದು ಕೆನ್ನೆಗೆ ಬಾರಿಸಿದರು.

ಅಷ್ಟಕ್ಕೆ ತೃಪ್ತಿಪಡದ ಮಹಾಶಯ ನನ್ನನ್ನು ಹೊರಕ್ಕೆ ಬಿಡದೆ ಪೇದೆಗಳ ವಶಕ್ಕೆ ಬಲಿಪಶುವಿ ನಂತೆ ಒಪ್ಪಿಸಿದರು. ಸೆಮಿಉಲ್ಲಾ ಮತ್ತಿತರ ಐದಾರು ಜನ ಪೋಲೀಸರು ಹಸಿದ ನಾಯಿಗಳಂತೆ ನನ್ನನ್ನು ಸುತ್ತುವರಿದು, ಬೆನ್ನು ಎದೆ-ಹೊಟ್ಟೆ-ಕೈಕಾಲುಗಳಿಗೆ ತಮ್ಮ ಬೂಟು-ದೊಣ್ಣೆಗಳ ರುಚಿ ಯನ್ನು ಉಣಿಸುತ್ತ "ಮಾದಿಗ ಸೂಳೆಮಗನೇ, ಮುಂಡ್ರಿಗುಟ್ಟಿದವನೇ" ಎಂದು ಅವಾಚ್ಯವಾಗಿ ಬೈಯತೊಡಗಿದರು.

ಅಸ್ಪೃಶ್ಯತಾ ಕಾನೂನಿನನ್ವಯ ಅಸ್ಪೃಶ್ಯರಿಗೆ ಅವರ ಜಾತಿ ಹಿಯ್ಯಾಳಿಸಿ ಮೇಲಿನಂತೆ ಬಯ್ದವ ರಿಗೆ ಶಿಕ್ಷೆವಿಧಿಸಬೇಕು. ಆದರೆ ಈ ಮಾತುಗಳನ್ನು ಕಾನೂನನ್ನು ಅನುಷ್ಠಾನಕ್ಕೆ ತರುವ ಅಧಿಕಾರ ವರ್ಗದವರೇ ಧಾರಾಳವಾಗಿಉಪಯೋಗಿಸಿದರೆ?

ಅಮಾನುಷವಾಗಿ ತೃಪ್ತಿಯಾಗುವವರೆಗೆ, ಒದ್ದು ಬೈದಾದ ಮೇಲೆ ನನ್ನನ್ನು ಮನೆಗೆ ಬೀಳ್ಕೊಟ್ಟರು. ಪ್ರತಿ ನಿತ್ಯ ನಗರವನ್ನು ಸ್ವಚ್ಛ ಮಾಡುವುದರ ಮೂಲಕ ನಾಗರೀಕರ ಆರೋಗ್ಯ ಕಾಪಾಡುತ್ತಿರುವ ನನಗೆ ಈ ದೇಶದ ಸಂವಿಧಾನ ಕೊಡ ಮಾಡಿರುವ ವಾಕ್ ಹಕ್ಕು ಇಲ್ಲವೆ? ಸಂವಿಧಾನ ಬದ್ಧ ಈ ಹಕ್ಕು ಕೇವಲ ಅಕ್ಷರ ಜ್ಞಾನಿಗಳಿಗೆ, ಶ್ರೀಮಂತರಿಗೆ, ರಾಜಕಾರಣಿಗಳಿಗೆ ಹಾಗೂ ಅಧಿಕಾರಿಗಳಿಗೆ ಸೀಮಿತವೆ?

ಸೆಮಿಉಲ್ಲಾ ತನ್ನ ಅಧಿಕಾರ ದರ್ಪದಿಂದ ಆತನೆದುರಿಗೆ ಮಾತನಾಡುವ ವ್ಯಕ್ತಿಗಳಿಗೆ ಒಂದೊಂದು ದಿನ "ಪೋಲೀಸಿನ ವಿಮಾನದ" ರುಚಿಯನ್ನು ತೋರಿಸುತ್ತೇನೆಂದು ಬೆದರಿಸುವನು. ಹೀಗೆ ಅಧಿಕಾರ ದುರುಪಯೋಗಮಾಡಿಕೊಳ್ಳು ತ್ತಿರುವವರ ಮೇಲೆ ಯಾವ-ಯಾರ ಅಂಕುಶವಿ ಲ್ಲವೆ? ಈಗಲೂ ಈತನ ಕುತಂತ್ರ-ದ್ವೇಷದಿಂದ, ನಿರಪರಾಧಿ ನನ್ನ ತಮ್ಮ ತಿಪ್ಪೇಸ್ವಾಮಿಮತ್ತಿತರ ದಲಿತರು ಕಳ್ಳತನ ಆರೋಪದಿಂದ ಪೋಲೀಸು ಠಾಣೆಯಲ್ಲಿ ನರಳುತ್ತಿರುವರು.—ಟಿ. ರುದ್ರೇಶ್

## ಕತ್ತಲೊಳನೆ ಮಾತುಕತೆ

# ಜಾತಿ ಕ್ಯಾನ್ಸರ್ Vs ಡಾಕ್ಟರ್

ಹೆಸರು : ಸಿ. ಗುರುವಪ್ಪ ಎಂ ಬಿ ಬಿ ಎಸ್, ಎಂ ಡಿ
ಕೆಲಸ : ವೈದ್ಯಾಧಿಕಾರಿ, ತಿಪಟೂರು ಜನರಲ್ ಆಸ್ಪತ್ರೆ

V/s

ಹೆಸರು : ಸಂತೋಷಕುಮಾರಿ
ಕೆಲಸ : ಅದೇ ಆಸ್ಪತ್ರೆ ಸ್ಟಾಫ್ ನರ್ಸ್

ಚಿಕ್ಕ ವಯಸ್ಸಿನಲ್ಲೇ ತಂದೆ ಕಳೆದು ಕೊಂಡು ಅತ್ಯಂತ ಕಷ್ಟದಲ್ಲಿ ಬೆಳೆದು ಓದಿ ಡಾಕ್ಟರ್ ಆದರೂ ಜಾತಿಜ್ವಾಲೆ ಅವರನ್ನು ಬಿಡಲಿಲ್ಲ. ದೊಡ್ಡೇಗೌಡನೆಂಬ ಒಬ್ಬ ಹುಷಾರಿಲ್ಲದೆ ಆಸ್ಪತ್ರೆ ಸೇರಿದ. ಒಂದು ರಾತ್ರಿ ಹೊಟ್ಟೆ ನೋವು ಜಾಸ್ತಿಯಾಗಿ ಅಲ್ಲಿದ್ದ ನರ್ಸನ್ನು ಕೇಳಿದ– 'ನೋಡಿ ಸಿಸ್ಟರ್ ನೋವು ಕಡಿಮೆಯಾಗಿಲ್ಲ'. ನರ್ಸ್ ಉತ್ತರಿಸಿದರು 'ಯಾವನ್ ಡಾಕ್ಟರ್ ನೋಡುವುದು, ಆ ಗುರುವಪ್ನ, ಅದ್ಕೆ ಮತೆ. ಆ ಹೊಲೆ ಸೂಳೆವ ಕೈಗೆ ನೋಡಕ್ಕ ರಲ್ಲ ಸೂಳೆಮಗನ್ಗೆ ಯಾರುಕೆಲ್ಸ ಕೊಟ್ಟೋರು. ಸಮುದ್ರದಲ್ಲಿ ಮೀನಿಡಿದಿದ್ರೆ ಗೊತ್ತಾಗೋದು ಉಚ್ಚೇಲಿ ಮೀನು ಹಿಡಿಯೋ ಜಾತಿ!. ಇದನ್ನು ಸಹಿಸಲಾರದ ರೋಗಿ 'ಅಸ್ಪೃಶ್ಯತಾ ವಿರೋಧಿ ಕಾನೂನು ಪ್ರಕಾರ' ಕೇಸು ಹಾಕಿದ.

ನರ್ಸ್ ಕೋರ್ಟ್ ಬಾಗಲು ತುಳಿದದ್ದು ಕೇಳಿ ನೂರಾರುಲಿಂಗವಂತರಿಗೆಮೀಸೆಬಗ್ಗಿದಂತಾಯ್ತು. ಹಾಲಿ M. L. A ಶಿವಪ್ಪ ಎಂಬುವರು ಸಂತೋಷ ಕುಮಾರಿಯವರಿಗೆ ಬಲಗೈಯಾಗಿ ನಿಂತು, ದಲಿತ ಡಾಕ್ಟರ್ ಮೇಲೆ 'ಅತ್ಯಾಚಾರದ' ಒಂದು ಕೇಸು ದಾಖಲು ಮಾಡಿಸಿ ಎಲ್ಲಾ ಪತ್ರಿಕೆಯಲ್ಲೂ ಸುದ್ದಿ ಬರುವಂತೆ ಚಾಲೋಕು ಮಾಡಿದ್ದಾರೆ.

ಡಾಕ್ಟರ್ ಸಿಕಿದಾಗ ನಾನು ಚುಡಾಯಿಸಿದೆ. ಏನ್ ಡಾಕ್ಟರೆ ನಿಮ್ಮೆಸರು ಪೇಪರಲ್ಲಿ ಬಂದಿತ್ತಲ್ಲ. ಏನ್ ಮಾಡೋದ್ ಸ್ವಾಮಿ ಈ ಜಾತೀಲಿ ಹುಟ್ಟಿದೆ. ಅನುಭವಿಸಬೇಕಲ್ಲ; ಇಂಡೋನೇಷಿಯಕ್ಕೆ ಹೋಗಿ ಸಮ್ಮೇಳನದಲ್ಲಿ ಭಾಗವಹಿಸಿ ಪ್ರಶಸ್ತಿ ಪಡೆದೆ. ನನ್ನ ಹದಿನಾರು ವರ್ಷದ ಅನುಭವದಲ್ಲಿ ಒಂದು ಕೇಸಿಲ್ಲ' ಅಂತ ನಿಟ್ಟುಸಿರು ಬಿಟ್ಟರು. ಈಗಾಗಲೆ ವಿಭಾಗಾಧಿಕಾರಿಗಳಿಂದ ತನಿಖೆ ನಡೆದು ಅತ್ಯಾಚಾರಸಾಭೀತು ಪಡಿಸಲು ಯಾವುದೇಸಾಕ್ಷ್ಯಾಧಾರಗಳಿಲ್ಲವೆಂದುಗೊತ್ತಾಗಿದ್ದರೂ ರಾಜಕೀಯದ ಒತ್ತಾಯಕ್ಕೆ ಸಸ್ಪೆಂಡ್ ಮಾಡುವ ಸೂಚನೆಗಳಿವೆ. ತಿಪಟೂರು ಲಿಂಗಾಯಿತರಕೋಟೆ ಎಲ್ಲಖಾಯಿಲೆಗೆ ಔಷದಿ ಕೊಡುವ ಡಾಕ್ಟರ್ ಈಗ ಈ ಕೋಟೆಯಲ್ಲಿ ಜಾತಿ ಕ್ಯಾನ್ಸರ್‌ನಿಂದ ನರಳುತ್ತಿದ್ದಾರೆ.

ಅಕಸ್ಮಾತ್ ಗುರುವಪ್ಪನ ಬದಲು ಲಿಂಗಾಯಿತ ಡಾಕ್ಟರ್ ಇದ್ದರೆ ಅತ್ಯಾಚಾರ ನಿಜವಾಗಿದ್ದರೂ ಮುಚ್ಚಿ ಹೋಗುತ್ತಿತ್ತು ಅಲ್ವ?

ಕೇ. ಬಿ.

# ದೇವ್ರೋಲಿ ನರಬೇಟೆ

[5ನೇ ಪುಟದಿಂದ]

ಸೇರಿಸಿಕೊಳ್ಳಲಾಗಿದ್ದ ಕುನ್ವರ್ ಪ್ರಸಾದನೆಂಬ ಹರಿಜನರ ಹುಡುಗ ಅವರ ದೂತನಾಗಿದ್ದ. ಕುನ್ವರ್ ಪ್ರಸಾದನ ಇನ್ನೊಂದು ಕೆಲಸವೆಂದರೆ, ರಾಥೇಯನ ಪ್ರೇಯಸಿಯಾದ ಜಸ್ವರ್ ಸಿಂಗನ ಪತ್ನಿಗೆ ಸಂದೇಶಗಳನ್ನು ತಲುಪಿಸುವುದು. ಕಾಲಕ್ರಮೇಣದಲ್ಲಿ ರಾಥೇಯನ ಪ್ರೇಯಸಿಗೆ ಈ ಹುಡುಗನ ಮೇಲೆ ಪ್ರೀತಿ ಬಂದು. ಮೋಹಕ್ಕೊಳಗಾದಳು. ಇದರಿಂದ ಕುಪಿತನಾದ ರಾಥೇ ಮತ್ತು ಠಾಕೂರ್ ಬಂಧುಗಳೆಲ್ಲ(ಅವರಿಗೆ ಪೋಲೀಸರ ಬೆಂಬಲವಿದೆ ಎನ್ನುತ್ತಾರೆ) ಸೇರಿ ಊರಿನ ಹರಿಜನರ ಮೇಲೆ ವಿಷಕಾರಲು ಶುರುಮಾಡಿದರು.

ಸ್ವಲ್ಪ ಸಮಯದನಂತರ, ಪರಿಸ್ಥಿತಿ ಕೈಮೀರುವ ಸ್ಥಿತಿಗೆ ಬಂದಾಗ, ಕುಪಿತರಾದ ಠಾಕೂರರನ್ನು ಹೇಗೆ ಎದುರಿಸಬೇಕೆಂದು ಜಾತವ್ ಜನಾಂಗದವರು ಈ ವರ್ಷದ ಪ್ರಾರಂಭದಲ್ಲಿ ತಮ್ಮ ತಮ್ಮಲ್ಲೇ ಚರ್ಚಿಸತೊಡಗಿದರು. ಅವರಲ್ಲೊಬ್ಬನಾದ ಮಹಾರಾಮ್ ಪೋಲೀಸಿಗೆ ದೂರುಕೊಡುವ ಸಲಹೆ ಇತ್ತ. ಠಾಕೂರರ ಮತ್ತು ಥಕಾಯಿತರ ವಿರುದ್ಧ ಪೋಲೀಸಿನವರು ಚಕಾರವೆತ್ತುವುದಿಲ್ಲವೆಂಬ ಸತ್ಯ ಮುದುಕ ಲಾಟೂರಿ ಸಿಂಗನಿಗೆ ತಿಳಿದಿತ್ತು. ಅವನ ಪ್ರಕಾರ ರಾಥೇಸಿಂಗನ ಮತ್ತವನ ಗುಂಪಿನ ಚಲನವಲನಗಳನ್ನು ಥಾನ್‌ಸಿಂಗನ ಮೂಲಕ ಪೋಲೀಸಿಗೆ ತಿಳಿಸುವ ಪ್ರಯತ್ನ ಮಾಡಲು ತೀರ್ಮಾನಿಸಿದರು.

ಅದರಂತೆ ಥಾನ್‌ಸಿಂಗನನ್ನು ಸಂಪರ್ಕಿಸಿದರು. ರಾಥೇ ಮತ್ತು ಸಂತೋಷನ ಚಲನವಲನಗಳನ್ನು ತಿಳಿಸಿದರೆ ತಾನು ಪೋಲೀಸಿಗೆ ತಿಳಿಸಿ ಅವರನ್ನು ದಸ್ತಗಿರಿ ಮಾಡಿಸುವ ಭರವಸೆ ಇತ್ತ. ಈ ವರ್ಷದ ರಾಖಿ ಹಬ್ಬದ ದಿನ(ಅಕ್ಟೋಬರ್ 29ರಂದು) ರಾಥೇಯನ ಪ್ರೇಯಸಿಯಿಂದ, ರಾಥೇ ಮತ್ತು ಸಂತೋಷ ದೇವ್ರೋಲಿಯ ಶಿವದೇವಾಲಯದಲ್ಲಿ ಉಳಿದಿರುವ ಸಂಗತಿ ಕುನ್ವರ್ ಪ್ರಸಾದನಿಗೆ ತಿಳಿಯಿತು. ಈ ವರ್ತಮಾನವನ್ನು ಥಾನ್‌ಸಿಂಗನ ಮುಖಾಂತರ ಪೋಲೀಸರಿಗೆ ಮುಟ್ಟಿಸಲಾಯಿತು.

ಭ್ರಷ್ಟ ಪೋಲೀಸಿನವರಿಗೆ ಥಕಾಯಿತರನ್ನು ಬಂಧಿಸುವ ಮನಸ್ಸಾಗಲಿಲ್ಲ. ಆ ಕೂಡಲೇ ದೇವ್ರೋಲಿಗೆ ಬರುವುದನ್ನು ಬಿಟ್ಟು ಮಾರನೆ ದಿನ ಬರುವುದಾಗಿ (ಅಷ್ಟರಲ್ಲಿ ಸಂತೋಷ ಮತ್ತು ರಾಥೇ ಕಾಲುಕೀಳಲಿ ಎಂದು) ತಿಳಿಸಿದರು. ಆದರೆ ಅವರ ಗುಂಪಿನ ಇಬ್ಬರನ್ನು ಅವರು ದೇವಸ್ಥಾನದಲ್ಲಿ ಮಲಗಿದ್ದಾಗ ಬಂಧಿಸಲಾಯಿತು.

ಪೋಲೀಸಿನವರಿಗೆ ತಮ್ಮ ಜಾಡನ್ನು ತೋರಿಸಿದವರ್ಯಾರು ಎಂದು ತಿಳಿಯಲು ರಾಥೇ ಮತ್ತು ಸಂತೋಷರಿಗೆ ಕಷ್ಟವಾಗಲಿಲ್ಲ. ಎರಡು ದಿನಗಳ ನಂತರ ದೇವ್ರೋಲಿಗೆ ಬಂದು ಠಾಕೂರರನ್ನು ಭೇಟಿ ಮಾಡಿದರು. ಥಕಾಯಿತರ ಪರಿಸ್ಥಿತಿ ಸಡಿಲವಾಗಿತ್ತು, ಅದನ್ನು ಬಲಗೊಳಿಸಿಕೊಳ್ಳಲು ಗ್ರಾಮಸ್ಥರನ್ನು ಅವರುಹೀಗೆ ಕೇಳಿಕೊಂಡರು : "ಠಾಕೂರರ ಹತ್ತಿರ ಈಗ ಬಲವಾದ ಶಸ್ತ್ರಾಸ್ತ್ರಗಳಿಲ್ಲ. ಮೋಸಗಾರರುನಮ್ಮ ಶಸ್ತ್ರಗಳನೆಲ್ಲ ಕದ್ದಿದ್ದಾರೆ. ಜಾತವರಿಗೆ ತಕ್ಕ ಪಾಠ ಕಲಿಸಲು, ನಮಗೆ ಶಸ್ತ್ರಗಳನ್ನು ಕೊಡಿ". ಅದರಂತೆ ಗ್ರಾಮದ ಠಾಕೂರರು ರಾಥೇ ಮತ್ತು ಸಂತೋಷರಿಗೆ ಅಗತ್ಯವಾದ ಶಸ್ತ್ರಗಳನ್ನೊದಗಿಸಿದರು. ಪರಿಣಾಮವಾಗಿ ನವೆಂಬರ್ 18ರಸಂಜೆ ಜಾತವರಿಗೆ ತಕ್ಕ'ಪಾಠ' ಕಲಿಸಿದರು.

ಈ ಕಗ್ಗೊಲೆ ನಡೆದ ಎರಡು ದಿನಗಳ ನಂತರ ಭೇಟಿಕೊಟ್ಟ ಮುಖ್ಯಮಂತ್ರಿ ವಿ.ಪಿ ಸಿಂಗರ ಪ್ರಕಾರ ಈ ನರಬಲಿಯ ಅರಿವು ಪೋಲೀಸರಿಗಾದದ್ದು ನವೆಂಬರ್ 19ರ ಮುಂಜಾನೆಯೇ. ಆದರೆ ಇದು ಸತ್ಯವೆ? ನಿಜವಾಗಿ ಈ ಘಟನೆ ನಡೆಯುವುದಕ್ಕೆ ಮೊದಲೇ ಜಾತವರಿಗೆ ತಕ್ಕ ಪಾಠ ಕಲಿಸುವ ಯೋಜನೆಗಳನ್ನು ರಾಥೇ ಮತ್ತು ಸಂತೋಷ ಚಿಂತಿಸುತ್ತಿದ್ದರು. ಇದರ ಜೊತೆಗೆ ಗೆಳೆಯರಾದ ಬಲಾಸ್‌ಪುರದ ಚೌಧುರಿಯವರು ಕೊಲೆಯ ಬಗ್ಗೆ 18ರ ರಾತ್ರಿಯೇ ಪೋಲೀಸಿಗೆ ವಿಷಯ ತಿಳಿಸಿದ್ದರು. ಅವರೇಕೆ ಪ್ರತಿಕ್ರಿಯಿಸಲಿಲ್ಲ? ಇದೂ ಸಾಲದೆಂಬಂತೆ ಪಕ್ಕದ ಸರ್ಮೈನಿ ಗ್ರಾಮದಲ್ಲಿ ಪಿ.ಎ.ಸಿ. ಕ್ಯಾಂಪ್ ಕೂಡ ಇತ್ತು. ಗುಂಡಿನ ಶಬ್ದ ಅಷ್ಟು ದೂರದಲ್ಲಿ ಕೇಳಿಸದಿರುವುದಕ್ಕೆ ಕಾರಣವೇ ಇಲ್ಲ. ಗುಂಡಿನ ಶಬ್ದದಿಂದ ನೆರೆಯ ಗ್ರಾಮದ ಜನ ಬರಬಹುದಾದರೆ, ಪೋಲೀಸಿನವರಿಗಾದ ತಾಪತ್ರಯವಾದರೂ ಏನು ?

ಮುಖ್ಯಮಂತ್ರಿ ವಿ.ಪಿ. ಸಿಂಗ್‌ರವರು ತಮ್ಮ "ನೈತಿಕ ಜವಾಬ್ದಾರಿ"ಯನ್ನು ಅರಿತು, ಕೊಲೆಗಾರರನ್ನು ಪತ್ತೆಹಚ್ಚದಿದ್ದರೆ ತಮ್ಮ ಮನುಷ್ಯತ್ವಕ್ಕೇ ಅವಮಾನ ಎಂದು ಪ್ರತಿಜ್ಞೆ ಮಾಡಿದ್ದಾರೆ. ನಲವತ್ತು ಜನರನ್ನು ಪ್ರಶ್ನೆ ಮಾಡಿ, ಎಂಟು ಜನರ ಆಸ್ತಿಪಾಸ್ತಿಯನ್ನು ಮುಟ್ಟುಗೋಲು ಹಾಕಲು ಆಜ್ಞೆ ಹೊರಡಿಸಲಾಗಿದೆ. ಆದರೆ ಈ ಸದ್ದುಗದ್ದಲವೆಲ್ಲ ತಣ್ಣಗಾದಮೇಲೆ ನಮಗೀಗಾಗಲೇ ತಿಳಿದಿರುವ ಹಾಗೆ ಖದೀಮರು ಸುರಕ್ಷಿತವಾಗಿ ಉಳಿದು ಬಿಡುತ್ತಾರೋ ನೋಡಬೇಕು. ನಮ್ಮ ಶಂಕೆ, ಅನುಮಾನಗಳನ್ನು ಸುಳ್ಳಾಗಿಸಲು ವಿ.ಪಿ. ಸಿಂಗರ ತೀರ್ಮಾನವನ್ನು ಎದುರು ನೋಡಬೇಕಾಗಿದೆ. ●

# ದಟ್ಟ ಅರಣ್ಯ ಜಗತ್ತನ್ನು ಮಾನವೀಯಗೊಳಿಸಬೇಕು: ಅಚೀಬೆ

[ ಮುಖ್ಯದ ಪುಟದಿಂದ]

ಬರಿ ಅಲೆಮಾರಿಯಾದ, ಹೆಂಡತಿ ಮಕ್ಕಳನ್ನು ತೊರೆದ, ಇನ್ನೊಬ್ಬ ಹೆಣ್ಣಿನ ಸಂಗ ಮಾಡಿದ, ಹೇಗೋ ಬದುಕುತ್ತಿದ್ದ. ಸ್ತ್ರೀಯರೇ ಇಡೀ ಸಂಸಾರದ ಹೊಣೆಹೊತ್ತರು. ಇದು ಸರ್ವೇ ಸಾಮಾನ್ಯಕಥೆ. ಆದ್ದರಿಂದ ಇಂಥ ಸಾಮ್ಯ ಗಳನ್ನು ಗಮನಿಸಿದಾಗ ಇತರರಿಗೆ ಸ್ವಲ್ಪ ಬಲ ಬಂದಂತಾಗುತ್ತದೆ. ಭಾರತದಲ್ಲಿ ನಡೆಯುತ್ತಿರುವ ಸಂಗತಿಗಳು ವಿಶಿಷ್ಟವಾದವೇನಲ್ಲ. ಆದರೆ ಅದು ಅತ್ಯಂತ ಕೆಡುಕಾದದ್ದು. ಇಂಥದೇ ಪರಿಸ್ಥಿತಿ ಜಗತ್ತಿನ ಇತರೆಡೆಗಳಲ್ಲಿಯೂ ಇದೆ ಎನ್ನುವುದೂ ಮುಖ್ಯ.

ಇತ್ತೀಚೆಗೆ ನಾನು ಒಂದು ಸಿಂಹಳೀಯ ಚಿತ್ರ ವನ್ನು ನೋಡಿದೆ. ಫ್ರೆಂಚ್ ವಸಹಾತು ಆಡಳಿತದಲ್ಲಿ ಸರ್ಕಾರ ನಾಡಿನ ಗಂಡಸರನ್ನು ಬಗ್ಗು ಬಡಿದು, ಅವರ ಹಕ್ಕುಗಳನ್ನು ಕಿತ್ತುಕೊಳ್ಳುತ್ತದೆ. ನಂತರ ನಾಡಿನ ಗಂಡಸರು ದ್ವಿತೀಯ ಯುದ್ಧದಲ್ಲಿ ಭಾಗವಹಿಸಿ ಇಲ್ಲವಾಗುತ್ತಾರೆ. ಆಗ ಸ್ತ್ರೀಯರೇ ಪುರುಷರ ಪಾತ್ರವನ್ನೂ ವಹಿಸುತ್ತಾರೆ. ಇಂಥದ್ದೆ ಪರಿಸ್ಥಿತಿ ನನ್ನ ನಾಡಿನಲ್ಲಿಯೂ ಆಯಿತು. ಬ್ರಿಟೀಷರು ಕಾಲೂರಿ, ತೆರಿಗೆಗಳನ್ನು ವಿಧಿಸಿದಾಗ ಸ್ತ್ರೀಯರು ಘೋಷಿಸಿದ್ದೇನು ಗೊತ್ತೆ? "ನಮ್ಮ ಸುದ್ದಿಗೆಬರಬೇಡಿ, ನಾವೇನು ಸರಕುಗಳಲ್ಲ". ಸ್ತ್ರೀಯರು ಬಂಡಾಯವೆದ್ದು ಬ್ರಿಟೀಷರು ಕೈ ಕೆಳಗಿನ ಅಧಿಕಾರಿಗಳನ್ನು ತಿರಸ್ಕರಿಸಿದರು. ಈ ಘಟನೆಯಿಂದಾಗಿ ನನ್ನ ಹಳ್ಳಿಯಲ್ಲಿ ಬ್ರಿಟೀಷ್ ಆಳ್ವಿಕೆಯ ಇತಿಹಾಸ ವನ್ನು ಗಮನಾರ್ಹವಾಗಿ ಬದಲಿಸಿತು.

ಆದ್ದರಿಂದ ಇತರೆಡೆ ತುಳಿತಕ್ಕೆ ಒಳಗಾದ ಮಂದಿಯೊಡನೆ ತುಳಿತಕ್ಕೆ ಒಳಗಾದವರು ಸಹಕರಿಸಬೇಕು ಎನ್ನುವುದು ಮುಖ್ಯ. ಇತರರಿಗೆ ಏನಾಯಿತು, ಏಕಾಯಿತು ಎನ್ನುವ ಅರಿವಿನಿಂದ ನಮ್ಮ ಸುತ್ತ ಭದ್ರಕೋಟೆ ರಚಿಸಿಕೊಳ್ಳಬಹುದು. ನಾವು ಈಗ ಮಾತನಾಡುತ್ತಿರುವ ಸಂಗತಿಗಳ ಬಗ್ಗೆ ಜಗತ್ತಿನ ಇತರರಿಗೆ ಏನೇನೂ ಏನೇನು ಗೊತ್ತಿಲ್ಲ. ಆದ್ದರಿಂದ ಸಾಹಿತ್ಯದ ಮೂಲಕ ಆ ಇತರರಿಗೂ ವಿಷಯಗಳನ್ನು ತಿಳಿಸುವುದು ಅತ್ಯಂತ ಪ್ರಮುಖದ್ದು ಎಂದು ನನಗನಿಸುತ್ತದೆ. ಆದರೆ ಅವರಿಗೆ ಈ ವಿಚಾರ ತಿಳಿಯಬೇಕೆಂದು ಕುತೂಹಲವೇ ಇಲ್ಲ. ಉಳ್ಳವರಿಂದ ಮಾಧ್ಯಮಗಳು ನಿಯಂತ್ರಣಗೊಂಡಿವೆ ಎಂಬುದು ನಿಜ. ಆದರೆ ಹಿಂದಿನ ಶತಮಾನಗಳಿಗಿಂತ 20ನೇ ಶತಮಾನ ಉತ್ತಮವಾದದ್ದು. ಜನ ಪ್ರವಾಸ ಕೈಗೊಳ್ಳುತ್ತಾರೆ. ಕಳೆದ 3000 ವರ್ಷಗಳಲ್ಲಿ ಅವರನ್ನು ನಿಯಂತ್ರಿಸಿದಂತೆ ಈಗ ಮಾಡಲಾಗುವುದಿಲ್ಲ. ಕೆಲವು ಜನಪ್ರಿಯ ಮಂದಿ ಬರುತ್ತಾರೆ, ಬದಲಾವಣೆಗೆ ಶ್ರಮಿಸುತ್ತಾರೆ.

ಧರ್ಮ ಎನ್ನುವುದು ಬಹಳಷ್ಟು ಜನರಿಗೆ ತಮ್ಮನ್ನು ನೋಡಿಕೊಳ್ಳುವ ಯಾವುದೇ ದೊಡ್ಡ ಶಕ್ತಿ. ವೈಯಕ್ತಿಕವಾಗಿ ಹೇಳುವುದಾದರೆ ನಾನು ಅಜ್ಞೇಯತವಾದಿ. ಪ್ರಮಾಣಪೂರ್ವಕವಲ್ಲದ್ದನ್ನು ನಂಬುವವನಲ್ಲ. ನಾನು ಹುಟ್ಟಿದ್ದು ಕ್ರೈಸ್ತ ಕುಟುಂಬದೊಳಗೆ. ನನ್ನ ತಂದೆ ತಾಯಂದಿರು ಕ್ರೈಸ್ತ ಮತಕ್ಕೆ ಮತಾಂತರ ಹೊಂದಿದವರು. ನನ್ನತಂದೆ ಧರ್ಮೋಪದೇಶಕ. ಮಿಷಿನರಿ ಶಾಲೆ ಹಾಗೂ ಚರ್ಚುಗಳಲ್ಲಿ ಶಿಕ್ಷಕ. ಚಿಕ್ಕಂದಿನಲ್ಲಿ ನನಗೆ ದೀಕ್ಷಾಸ್ನಾನ ಮಾಡಿಸಿ ಕ್ರೈಸ್ತನನ್ನಾಗಿಸಿದರು. ಯುವಕನಾಗಿದ್ದಾಗ ಚರ್ಚುಗಳಿಗೆ ಹೋಗುತ್ತಿದ್ದೆ. ಬೈಬಲ್ ಓದುತ್ತಿದ್ದೆ. ಪ್ರಾರ್ಥನಾ ಪದ್ಯಗಳನ್ನು ಹೇಳುತ್ತಿದ್ದೆ. ಆದರೆ ಅನಂತರದ ವರ್ಷಗಳಲ್ಲಿ ನನ್ನ ತಂದೆ ನಂಬಿದ್ದ ಸರಳ ಮತ ಶ್ರದ್ಧೆಯನ್ನೂ ನಾನು ಒಪ್ಪಿಕೊಳ್ಳುವುದು ಸಾಧ್ಯವಾಗಲಿಲ್ಲ. ಕ್ರೈಸ್ತ ಧರ್ಮವಾಗಲೀ ಇತರ ಯಾವುದೇ ಧರ್ಮವಾಗಲೀ ನನಗೆ ನಂಬಿಕೆ ಹುಟ್ಟಿಸಲಿಲ್ಲ. ನಾನು ಸ್ವಲ್ಪ ಸಂದೇಹವಾದಿ. ಯಾವುದೇ ಮತವಾಗಲೀ, ಅದು ಎಷ್ಟೇ ಶಕ್ತಿಯುತವಾಗಲಿ, ಅದು ಮಾನವನಿಗೆ ಹಾನಿಯನ್ನೇ ಮಾಡಿದೆ ಎಂದು ನನ್ನ ಗಟ್ಟಿ ಅನಿಸಿಕೆ. ಮನುಷ್ಯನಿಂದ ಜವಾಬ್ದಾರಿಯನ್ನು ತೆಗೆದು ಇತರ ಯಾವುದೇ ಶಕ್ತಿಗೆ ವರ್ಗಾಯಿಸುವ ತಂತ್ರದಿಂದ ಅಪಾರ ನಷ್ಟವಾಗಿದೆ. ಈ ಬಗೆಯ ಚಿಂತನೆ ಅತ್ಯಂತ ಪ್ರೌಢ ಧೋರಣೆ ಎನ್ನುವುದರ ಅರಿವು ನನಗೂ ಇದೆ. ಬಹಳ ಜನ ಹೇಳುವುದೇನೆಂದರೆ ಧರ್ಮವನ್ನು, ಮತವನ್ನು ನಿರಾಕರಿಸಿದ ತಕ್ಷಣ ನೈತಿಕತೆ ನಿರ್ನಾಮವಾಗುತ್ತದೆ ಅಂತ. ಅದನ್ನು ನಾನು ಒಪ್ಪುವುದಿಲ್ಲ. ನಾವು ಏನೇ ಯೋಚನೆ ಮಾಡಲಿ ಇತರರು ಯಾವ ರೀತಿ ಯೋಚಿಸುತ್ತಾರೆ ಎನ್ನುವುದನ್ನು ಪರಿಗಣಿಸಲೇ ಬೇಕಲ್ಲ. ಆದ್ದರಿಂದ ನಾನು ಧರ್ಮವನ್ನು ನಂಬುವವರಿಗೆ ಅವರು ನನ್ನ ಮಾತನ್ನು ಕೇಳುತ್ತಿದ್ದಾರೆಂದು ಭಾವಿಸಿದರೂ "ಎಂಥ ಮೂರ್ಖರಯ್ಯ ನೀವು, ದೇವರನ್ನು ನಂಬಿ ಹಾಳಾಗುತ್ತಿದ್ದೀರಲ್ಲ" ಎಂದು ಹೇಳುವ ಸಾಹಸ ಮಾಡಲಾರೆ. ಪ್ರತಿಯೊಬ್ಬ ಮನುಷ್ಯನಿಗೂ ನಂಬುವ ಬಿಡುವ ಹಕ್ಕು ಇದ್ದೇ ಇದೆ. ಈ ವಿಚಾರಕ್ಕೆ ನಾವು ಕೇಂದ್ರೀಕರಿಸಿಕೊಂಡು ಹೋರಾಡಬಾರದು. ಹಾಗಾದಾಗ ಮುಖ್ಯ ವಿಚಾರಗಳೇ ವಾಸ್ತವವಾಗಿ ಹೋರಾಡಬೇಕಾದಂಥ ಅಂಶಗಳೇ ಮೂಲೆ ಗುಂಪಾದಾವು.

ದೇವರ ವಿರುದ್ಧ ನಿಮ್ಮಲ್ಲಿ ಚಳವಳಿ ನಡೆದಾಗ ಉಚ್ಚವರ್ಗದವರಲ್ಲಿ ಕೆಳ ವರ್ಗದ ಜನರನ್ನು ಕೆರಳಿಸಿತು ಎಂದು ಹೇಳಿದಿರಿ. ಅದು ವಾಸ್ತವವಾದದ್ದೆ. ಇಂಥ ಚಳುವಳಿಗಳು ಉದ್ದೇಶಿತ ಪರಿಣಾ-ಮಗಳಿಗೆ ವಿರುದ್ಧವಾದಂಥ ಪರಿಣಾಮಗಳನ್ನುಂಟು ಮಾಡುತ್ತವೆ. ಜನರನ್ನು ಬಿಟ್ಟು ನೀವು ಯಾವ ಚಳವಳಿಯನ್ನೂ ಮಾಡಲಾರಿರಿ. ಜನರನ್ನು ಒಟ್ಟುಗೂಡಿಸಿ ಅವರಲ್ಲಿ ಪ್ರಜ್ಞೆ ಮೂಡಿಸುವಂತಾದರೆ ಅದಕ್ಕಿಂತ ಇನ್ನೇನು ಬೇಕು.

ಮತೀಯ ವಿಚಾರ, ರಾಜಕೀಯ ಒಂದರೊಳ-ಗೊಂದು ಸೇರಿಕೊಂಡರೆ ಎಲ್ಲ ಬಗೆಯ ದ್ವಂದ್ವಗಳು ಉದ್ಭವವಾಗುತ್ತವೆ. ನಮಗೆ ಮತ ಧರ್ಮ ವಿಚಾರ ಮುಖ್ಯವೇ ಅಲ್ಲ. ಬಹು ಸಂಖ್ಯಾತ ದಲಿತರ ಸ್ಥಾನ ಮಾನವನ್ನು ಮೂಲಭೂತವಾಗಿ ಬದಲಿಸುವುದೇ ಮುಖ್ಯ ಗುರಿಯಾಗಬೇಕು. ತಮ್ಮ ಪರಿಸ್ಥಿತಿ ಪರಿವರ್ತಿತವಾಗಬೇಕು ಎನ್ನುವುದರ ಅರಿವನ್ನು ಅವರಲ್ಲಿ ಮೂಡಿಸಬೇಕು. ಯಾಕೆಂದರೆ ದಲಿತರೆಲ್ಲ ಧೈರ್ಯಗುಂದಿದ್ದಾರೆ, ಆಸೆ ಕಳೆದು ಕೊಂಡಿದ್ದಾರೆ. ಬದಲಾವಣೆ ಅಗಬೇಕಾದದ್ದು ಕೇವಲ ಔಚಿತ್ಯ ಮಾತ್ರವಲ್ಲ ಅನಿವಾರ್ಯ ಅಗತ್ಯ ಎನ್ನುವುದನ್ನು ಅವರಿಗೆ ಅರ್ಥ ಪಡಿಸಬೇಕು.

ಕಳೆದ ಇಪ್ಪತ್ತು ವರ್ಷಗಳಲ್ಲಿ ಅಮೆರಿಕದ ಕಪ್ಪು ಜನರಲ್ಲಿ ಆಗಿರುವ ಪರಿವರ್ತನೆಯನ್ನು ನೋಡಿ. ನಂಬಲಸದಳವಾದಂಥದು. 1960 ರಿಂದ ಇಲ್ಲಿಯವರೆಗೆ ಅಗಾಧ ಬದಲಾವಣೆ ಆಗಿದೆ. ಇಂಥದು ಸಾಧ್ಯ.

ದಲಿತ ಜೀವಿಗಳ ಚಳುವಳಿ ಅತ್ಯಂತ ಅಗತ್ಯವಾದದ್ದು. ಸಾಹಿತಿಯಾಗಲಿ, ಯಾವುದೇ ಕಲಾವಿದನಾಗಲಿ ಮಾನವೀಯ ಪ್ರವೃತ್ತಿಯುಳ್ಳವನಲ್ಲದೆ ಬೇರೆ ಆಗಿರಲು ಸಾಧ್ಯವಿಲ್ಲ. ದಟ್ಟ ಅರಣ್ಯವಾಗಿರುವ ಜಗತ್ತನ್ನು ಮಾನವೀಯಗೊಳಿಸುವ ಪ್ರಯತ್ನ ಅವನದಾಗಬೇಕು. ಸಾಹಿತಿಯ ಕೆಲಸ ಇದಲ್ಲ ಎನ್ನುವ ಯಾವನೇ ಆಗಲಿ ಅವನ ಪಾಡಿಗೆ ಒಂಟಿಯಾಗಿ ಎಲ್ಲಾದರೂ ಇರಲಿ. ಸಮಾಜಕ್ಕೆ ಏನನ್ನೂ ಮಾಡಲಾಗದ ಪ್ರತ್ಯೇಕಗೊಂಡ ಕಲೆ ಇದೆ ಎಂದು ಯಾರಾದರೂ ಹೇಳಿದರೆ ನನಗೆ ಅದು ಮೂಲತಃ ಅರ್ಥದಲ್ಲಿ ಕಲೆ ಎಂತಲೇ ಅನ್ನಿಸುವುದಿಲ್ಲ. ನನ್ನ ಸುಸ್ಮೃತಿಯಲ್ಲಿ ಕಲೆಯ ದೇವತೆಯೇ ನೈತಿಕತೆಯ ದೇವತೆಯೂ ಹೌದು. ಸೃಜನಶೀಲತೆಯ ದೇವತೆಯೂ ಆಕೆಯೆ.

ಔದ್ಯೋಗಿಕತೆ ಎನ್ನುವುದರ ಅರ್ಥವೇ ಹಲವರಿಗೆ ಸ್ಪಷ್ಟವಿಲ್ಲ. ವ್ಯವಸಾಯಿಕ ಸಮಾಜದಲ್ಲಿನ ಬಹುತೇಕ ಸಂಖ್ಯೆಯ ಜನರನ್ನು ಔದ್ಯೋಗಿಕತೆಯ ಪ್ರಭಾವ ಮುಟ್ಟುವುದೇ ಇಲ್ಲ ಎನ್ನುವುದು ನನ್ನ ಅನಿಸಿಕೆ. ಅಲ್ಲೊಂದು ಇಲ್ಲೊಂದು ಕಾರ್ಖಾನೆಗಳನ್ನು ಕಟ್ಟಿ ಇನ್ನೆಲ್ಲೊ ತಯಾರಾದ ಬಿಡಿ ಭಾಗಗಳನ್ನು ತಂದು ಜೋಡಿಸಿ ಯಂತ್ರ ಮಾಡಿ ಔದ್ಯೋಗಿಕತೆ ಬಂತು ಎಂದರೆ ಏನರ್ಥ. ವ್ಯವಸಾಯಕ್ಕೆ ನಾವು ಹೆಚ್ಚು ಗಮನ ನೀಡಬೇಕು. ಇರುವ ಸಂಪನ್ಮೂಲಗಳನ್ನು ಕೂಡಿ